ನವಸಾಕ್ಷರ ಪುಸ್ತಕ ಮಾಲೆ ೨೯

# ಬೇಲೂರು ಹಳೇಬೀಡು

ಜ. ಹೊ. ನಾರಾಯಣಸ್ವಾಮಿ






ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಲೋಕಶಿಕ್ಷಣ ನಿರ್ದೇಶನಾಲಯ

ನವಸಾಕ್ಷರ ಪುಸ್ತಕ ಮಾಲೆ - ೨೯

# ಬೇಲೂರು ಹಳೇಬೀಡು




ಜ. ಹೊ. ನಾರಾಯಣ ಸ್ವಾಮಿ







ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ-೫೮೩ ೨೭೭

BELURU HALEBEEDU : by Ja. Ho. Narayana Swamy. Published by The Director of Prasaranga, Kannada University, Hampi - 583 211, KARNATAKA.
First Impression 1994, Pp. i i + 26, Rs. 8.00.

---



**ಸಂಯೋಜನಾಧಿಕಾರಿ**
ಎಚ್. ಎಸ್. ಶ್ರೀಮತಿ
ಪಠ್ಯ ಪುಸ್ತಕ ರಚನಾ ವಿಭಾಗ

**ಪ್ರಕಾಶಕರು**
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೧೧

**ಮುಖಪುಟ ವಿನ್ಯಾಸ**
ಕೆ. ಮಕಾಳಿ

ಬೆಲೆ : ರೂ. ೮.೦೦

**ಮುದ್ರಕರು**
ಗುರುದತ್ ಪ್ರಿಂಟರ್ಸ್
೯೧, ೩ನೇ ಕ್ರಾಸ್, ೧ನೇ ಮೇನ್
ನ್ಯೂ ಟಿಂಬರ್‌ಯಾರ್ಡ್ ಲೇಔಟ್
ಮೈಸೂರು ರಸ್ತೆ,
ಬೆಂಗಳೂರು ೫೬೦ ೦೨೬




# ಬೇಲೂರು ಹಳೇಬೀಡು

ನೀವು ಈಗ ಓದಬಲ್ಲಿರಿ, ಬರೆಯಬಲ್ಲಿರಿ ಎಂದು ಕೇಳಿದರೇ ಸಂತೋಷವಾಗುತ್ತದೆ. ನಿಮ್ಮ ಜೊತೆಯಲ್ಲಿ ಮಾತನಾಡಬೇಕು, ನಿಮ್ಮ ಅನುಭವಗಳನ್ನು ಕೇಳಬೇಕು, ಓದುವಾಗ ಬರೆಯುವಾಗ ನಿಮಗೆ ಆಗುವ ಆನಂದವನ್ನು ನೋಡಿ ಆನಂದಿಸಬೇಕು ಎನ್ನುವ ಆಸೆ ಉಂಟಾಗುತ್ತದೆ. ಓದು ಬರಹ ಕಲಿತ ಕಾರಣ ನೀವು ಈಗ ಹೆಚ್ಚು ಶಕ್ತಿವಂತರು. ಜೀವನ ಸಮಸ್ಯೆಗಳನ್ನು ತಿಳಿಯಬಲ್ಲವರು. ನಮ್ಮ ಸುತ್ತ ಏನು ನಡೆಯುತ್ತಿದೆ, ನಮ್ಮ ರಾಜ್ಯದಲ್ಲಿ, ದೇಶದಲ್ಲಿ ಏನು ಆಗುತ್ತಿದೆ ಎಂಬುದನ್ನು ಅರ್ಥಮಾಡಿಕೊಳ್ಳಬಲ್ಲವರು. ಅಷ್ಟೇ ಏಕೆ. ಪ್ರಪಂಚದ ಬೇರೆ ಬೇರೆ ದೇಶಗಳಲ್ಲಿ ಆಗುತ್ತಿರುವುದನ್ನೂ ಕೂಡ ತಿಳಿಯಬಲ್ಲವರು. ಆದಕಾರಣ ಈಗ ನಿಮ್ಮ ಕುತೂಹಲ ಕೆರಳುತ್ತದೆ. ಅದು ಸಹಜ. ಅದಕ್ಕಾಗಿ ನಿಮಗೆ ನಾನೊಂದು ಕಥೆ ಹೇಳುತ್ತೇನೆ.

ಆ ಕಥೆ ನಿನ್ನೆ ಮೊನ್ನೆಯದಲ್ಲ. ಎಂಟನೂರು ವರ್ಷಗಳಿಗೆ ಹಿಂದಿನದು. ಅದು ಹೊಯ್ಸಳರ ಕಥೆ. ಈ ಹೊಯ್ಸಳರು ಯಾರು ಎಂದರೆ ಕರ್ನಾಟಕದ ಶಿಲ್ಪಕಲೆಗೆ, ದಕ್ಷ ಆಡಳಿತಕ್ಕೆ, ಪರಮತ ಪ್ರೀತಿಗೆ ಹೆಸರಾದವರು. ನೀವು ಬೇಲೂರು, ಹಳೇಬೀಡು, ಸೋಮನಾಥಪುರಗಳನ್ನು ನೋಡಿರಬೇಕು ಅಲ್ಲವೇ? ಇವು ಜಗತ್ತಿನಲ್ಲಿಯೇ ಪ್ರಸಿದ್ಧಿ ಪಡೆದ ಹೊಯ್ಸಳ ದೇವಸ್ಥಾನಗಳು. ಇವುಗಳನ್ನು ನೋಡಲು ಸಾವಿರಾರು ಜನ ಬರುತ್ತಾರೆ. ಹೊರದೇಶದವರಂತು ಇಲ್ಲಿನ ಶಿಲ್ಪಿಗಳ ಕೆತ್ತನೆಗೆ ಮಾರು ಹೋಗಿದ್ದಾರೆ. ಸುಂದರವಾದ ಆ ಕಲ್ಲಿನ ಕೆತ್ತನೆಗಳನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ದೇವಸ್ಥಾನದ ಆ ಕೆತ್ತನೆಗಳನ್ನು

ಕಂಡು ಅವುಗಳ ಸೊಬಗಿಗೆ ಮಾರುಹೋಗಿ ಅನೇಕ ಕವಿಗಳು ಕವನಗಳನ್ನು ಕಟ್ಟಿ ಹಾಡಿದ್ದಾರೆ. ಕಾದಂಬರಿ ನಾಟಕಗಳನ್ನೂ ರಚಿಸಿದ್ದಾರೆ. ಚಲನ ಚಿತ್ರಗಳನ್ನು ತೆಗೆದು ಆನಂದಿಸಿದ್ದಾರೆ. ಇವುಗಳ ಹಿರಿಮೆಯನ್ನು ಕುರಿತು ನೂರಾರು ಪುಸ್ತಕಗಳು ಬಂದಿವೆ. ಕವಿಗಳು, ಕಾದಂಬರಿಕಾರರು, ನಾಟಕಕಾರರು ಇದರ ಮಹತ್ವವನ್ನು ಬರೆದು ಬರೆದು ದಣಿದಿದ್ದಾರೆ. ಜನರಂತೂ ಇವುಗಳ ಸೌಂದರ್ಯವನ್ನು ನೋಡಿ ತಣಿಯರು ! ಹಾಡಿ ದಣಿಯರು ! ನೋಡಿದಷ್ಟೂ ನೋಡಬೇಕೆನಿಸುವ, ಹಾಡಿದಷ್ಟೂ ಹಾಡಬೇಕೆನಿಸುವ ಆಕರ್ಷಣೆ !ಅದು ಯಾವ ಮೋಡಿಯೋ?

ಚೆನ್ನಕೇಶವ ದೇವಾಲಯ



ಬಾಗಿಲೊಳು ಕೈ ಮುಗಿದು ಒಳಗೆ ಬಾ ಯಾತ್ರಿಕನೆ

ಶಿಲೆಯಲ್ಲವೀ ಗುಡಿಯು ಕಲೆಯ ಬಲೆಯು

ಎಂದು ನಮ್ಮ ರಾಷ್ಟ್ರಕವಿ ಕುವೆಂಪು ಹಾಡಿದರೆ ಪದ್ಮಭೂಷಣ ಡಾ. ಡಿ.ವಿ.ಗುಂಡಪ್ಪನವರು

"ಅಲ್ಲಿಂದ ಮೇಲಕ್ಕೆ ಕಣ್ಣೆತ್ತಿ ನೋಡಿದರೆ ಕಾಣುವುದು ಭಾವಾನಂದ ಲೋಕ. ಅದು ಗಾಂಧರ್ವ ಲೋಕ. ಅಪ್ಸರೆಯಂಥ ಮದನಿಕೆಯರು ಅಲ್ಲಿ ಹಾವ ಭಾವ ವಿಲಾಸಗಳನ್ನು ತೋರುತ್ತಿದ್ದಾರೆ. ಒಬ್ಬಾಕೆ ಕನ್ನಡಿಯಲ್ಲಿ ನೋಡಿಕೊಳ್ಳುತ್ತ ತನ್ನ ಮೈ ಬೆಡಗಿಗೆ ತಾನೇ ಮನಸೋತಿದ್ದಾಳೆ. ಇನ್ನೊಬ್ಬಳು ಸುಗಂಧ ತೈಲಗಳಿಂದ ತಲೆಗೂದಲನ್ನು ಸಿಂಗರಿಸಿಕೊಳ್ಳುತ್ತಿದ್ದಾಳೆ. ಮತ್ತೊಬ್ಬಳು ಆಭರಣ ಧರಿಸಿಕೊಳ್ಳುವ ಸಂಭ್ರಮದಲ್ಲಿದ್ದಾಳೆ. ಒಬ್ಬಳು ಓಕುಳಿಯಾಟದಲ್ಲಿದ್ದಾಳೆ. ಒಬ್ಬಳು ಬೇಟೆಯ ರಭಸದಲ್ಲಿದ್ದಾಳೆ. ಕೆಲವರು ಗಾನ ಪರವಶರಾಗಿದ್ದಾರೆ. ಒಬ್ಬಳು ಸೀರೆಯಲ್ಲಿ ಚೇಳುಕಾಣಿಸಿದ ನೆವದಿಂದ, ಇನ್ನೊಬ್ಬಳು ಕೋತಿಯ ಕಾಟದ ನೆವದಿಂದ, ಭಯ ಕೋಪಗಳ ಆವೇಶವನ್ನು ತಾಳಿ ಮೆಯ್ಸೊಬಗನ್ನು ವಿಕಾಸಗೊಳಿಸುತ್ತಿದ್ದಾರೆ. ಎಲ್ಲರೂ ಪರಮ ಸುಂದರಿಯರು ಮತ್ತು ಎಲ್ಲರೂ ತಮ್ಮ ತಮ್ಮ ಸೌಂದರ್ಯದ ಮಹತ್ವವನ್ನು ತಿಳಿದುಕೊಂಡವರು. ಒಬ್ಬೊಬ್ಬಾಕೆ ಒಂದೊಂದು ಬಗೆಯ ಶೃಂಗಾರದ ಸೌಭಾಗ್ಯವನ್ನು ಸೂಸುತ್ತಿದ್ದಾಳೆ. ಜಗತ್ತಿರಬಹುದು, ದೈವವಿರಬಹುದು, ಆದರೆ ಜಗತ್ತೂ ದೈವವೂ ಸಾಧನ ಮಾತ್ರಗಳು ಎಂದು ವರ್ಣಿಸಿದ್ದಾರೆ.

ಹೊಯ್ಸಳರ ಕಥೆ ಎಂದೆ ಅಲ್ಲವೇ ? ಈಗಿನ ಮೂಡಿಗೆರೆ ತಾಲೂಕಿನಲ್ಲಿ ಅಂಗಡಿ ಎಂಬ ಹಳ್ಳಿ ಹತ್ತಿರ ಸೊಸೆವೂರು ಅಥವಾ ಶಶಕಪುರ ಎಂಬ ಹಳ್ಳಿ ಇತ್ತು. ಅಲ್ಲಿ ಸಳ ಎಂಬುವವನು ಇದ್ದ. ಅವನ ಮತ್ತೊಂದು ಹೆಸರು ನೃಪಕಾಮ ಎಂದು. ಅವನೇ ಹೊಯ್ಸಳ ವಂಶದ ಮೂಲಪುರುಷ. ಸಳ ಒಂದು ಸಲ ಸೊಸೆವೂರಿನ ವಾಸಂತಿಕಾ ಗುಡಿಗೆ ಹೋಗಿದ್ದ. ಅಲ್ಲಿ ಸುದತ್ತ ಎಂಬ ಜೈನಮುನಿ ಧ್ಯಾನ ಮಾಡುತ್ತಿದ್ದ. ಆಗ ಕಾಡಿನಿಂದ ಒಂದು ಹುಲಿ ಹಾರಿ ಬಂತು. ಸುದತ್ತಮುನಿ ಬೆತ್ತವನ್ನು ಕೊಟ್ಟು 'ಹೊಯ್ ಸಳ' ಎಂದ.(ಹೊಯ್ ಎಂದರೆ ಹೊಡೆ ಎಂದರ್ಥ). ಸಳ ಬೆತ್ತದಿಂದಲೇ ಹುಲಿಯನ್ನು ಕೊಂದ.



ಅಂದಿನಿಂದ ಸಳನಿಗೆ 'ಹೊಯ್‌ಸಳ' ಎಂಬ ಹೆಸರು ಬಂತು. ಅದು ಅವನ ವಂಶದ ಹೆಸರಾಯಿತು. ಸಳ ಹುಲಿಯನ್ನು ಕೊಲ್ಲುತ್ತಿರುವ ಚಿತ್ರ ಹೊಯ್ಸಳ ರಾಜಮನೆತನದ ಗುರುತು.

ಈಗಿನ ಕಾಲದಲ್ಲಿ ಹುಲಿ ಕಾಣುವುದೇ ಅಪರೂಪ. ಹಿಂದಿನ ಕಾಲದಲ್ಲಿ ಕಾಡು ದಟ್ಟವಾಗಿತ್ತು. ಹೆಚ್ಚು ಪ್ರಾಣಿಗಳೂ ಇದ್ದುವು. ಈಗಿನಂತೆ ಕಾಡು ನಾಶವಾಗಿರಲಿಲ್ಲ. ಚರ್ಮದ ಆಸೆಗೆ, ಉಗುರಿನ ಆಸೆಗೆ, ದಂತದ ಆಸೆಗೆ ಕಾಡು ಪ್ರಾಣಿಗಳನ್ನು ಕೊಂದು ಹಾಕುತ್ತಿರಲಿಲ್ಲ. ಅವು ತೊಂದರೆ ಕೊಡುತ್ತವೆ ಎಂದು ಕಂಡುಬಂದಾಗ ಮಾತ್ರ ರಕ್ಷಣೆಗಾಗಿ ಕೊಲ್ಲುತ್ತಿದ್ದರು. ಈಗ ಹಣ, ಆಸ್ತಿಗಾಗಿ ಮನುಷ್ಯ ಮನುಷ್ಯನನ್ನೇ ಕೊಲ್ಲುವಂತೆ ಆಗ ಕೊಲ್ಲುತ್ತಿರಲಿಲ್ಲ. ಪ್ರಕೃತಿಯ ಬಗ್ಗೆ ಒಲವಿತ್ತು. ಪ್ರಾಣಿಗಳ ಬಗ್ಗೆ ದಯೆ ಇತ್ತು. ಇದು

ಅಂದಿನವರ ದೊಡ್ಡ ಗುಣ ಆಗಿತ್ತು.

ಸಳ ಹುಲಿಯನ್ನು ಕೊಂದ ಸಂಗತಿ ನಡೆದದ್ದು ಈಗ್ಗೆ ಒಂದು ಸಾವಿರ ವರ್ಷಗಳ ಹಿಂದೆ. ಸಳನ ನಂತರ ಈತನ ವಂಶದ ಸುಮಾರು ಹನ್ನೆರಡು ಜನ ರಾಜರು ಹೊಯ್ಸಳ ಸಾಮ್ರಾಜ್ಯವನ್ನು ಆಳಿದರು. ಅವರಲ್ಲಿ ಹೆಸರು ವಾಸಿಯಾದ ರಾಜಕಾರಣಿ ವಿಷ್ಣುವರ್ಧನ. ಇವನ ಮತ್ತೊಂದು ಹೆಸರು ಬಿಟ್ಟಿದೇವ. ಹೊಯ್ಸಳ ಸಾಮ್ರಾಜ್ಯ ಹನ್ನೊಂದನೆ ಶತಮಾನದಿಂದ ಹದಿನಾಲ್ಕನೇ ಶತಮಾನದವರೆಗೆ ಆಳಿತು. ವಿಷ್ಣುವರ್ಧನನ ತಂದೆಯ ಹೆಸರು ಎರೆಯಂಗ. ತಾಯಿಯ ಹೆಸರು ಏಚಲದೇವಿ. ಇವರಿಗೆ ವೀರಬಲ್ಲಾಳ ಎಂಬ ಅಣ್ಣ, ಉದಯಾದಿತ್ಯ ಎಂಬ ತಮ್ಮ ಇದ್ದರು. ಅಣ್ಣ ವೀರಬಲ್ಲಾಳ ಎಂಟು ವರ್ಷಗಳ ಕಾಲ ರಾಜನಾಗಿದ್ದ. ಇವನು ಕಾಲವಾದ ಮೇಲೆ ವಿಷ್ಣುವರ್ಧನ ರಾಜನಾದ. ವಿಷ್ಣುವರ್ಧನ ಪಟ್ಟಕ್ಕೆ ಬಂದಾಗ ಅವನಿಗೆ ಕೇವಲ ಹದಿನೆಂಟು ವರ್ಷ. ಇನ್ನೂ ಯುವಕ. ಬಾಲ್ಯದಲ್ಲಿ ಅಣ್ಣ ವೀರ ಬಲ್ಲಾಳನೊಡನೆ ಕೂಡಿ ಅನೇಕ ಯುದ್ಧಗಳಲ್ಲಿ ಗೆದ್ದು ಅನುಭವ ಪಡೆದಿದ್ದ. ಅವನು ಹುಟ್ಟಿನಿಂದಲೇ ವೀರನಾಗಿದ್ದ, ಪರಾಕ್ರಮಿಯಾಗಿದ್ದ. ಇವನು ಶತ್ರು ರಾಜರುಗಳನ್ನು ಸೋಲಿಸಿದ. ಹೊಯ್ಸಳ ಸಾಮ್ರಾಜ್ಯವನ್ನು ವಿಸ್ತರಿಸಿದ.

ವಿಷ್ಣುವರ್ಧನನ ಹೆಂಡತಿ ಶಾಂತಲಾದೇವಿ. ಈಕೆಯ ಹೊಟ್ಟೆಯಲ್ಲಿ ಬಲ್ಲಾಳದೇವ ಹುಟ್ಟಿದ. ಶಾಂತಲಾದೇವಿ ಸತ್ತ ಮೇಲೆ ವಿಷ್ಣುವರ್ಧನ ಲಕ್ಷ್ಮೀದೇವಿಯನ್ನು ಮದುವೆ ಆದ. ಈಕೆಯ ಹೊಟ್ಟೆಯಲ್ಲಿ ನರಸಿಂಹ ಹುಟ್ಟಿದ. ಶಾಂತಲಾದೇವಿ, ಲಕ್ಷ್ಮೀದೇವಿ ಇವರು ಪಟ್ಟದ ರಾಣಿಯರಾಗಿದ್ದರು. ಇವರಲ್ಲದೆ ವಿಷ್ಣುವರ್ಧನನಿಗೆ ಬಮ್ಮಲದೇವಿ, ರಾಜಲದೇವಿ, ಕಿರಿಯ ಶಾಂತಲಾದೇವಿ ಮತ್ತು ದೇವಕಿದೇವಿ ಎಂಬ ಹೆಂಡತಿಯರೂ ಇದ್ದರು.

ವಿಷ್ಣುವರ್ಧನ ರಣರಂಗದಲ್ಲಿ ಹೇಗೋ ಹಾಗೆ ರಾಜ್ಯಪಾಲನೆಯಲ್ಲೂ ಜಯಶಾಲಿಯಾಗಿದ್ದ. ಕಲಾಪ್ರಿಯನಾಗಿದ್ದ. ಜನ ನಗುಮುಖದಿಂದ ನಲಿಯುವುದನ್ನು ಕಾಣಲು ಆಶಿಸುತ್ತಿದ್ದ. ಇವನ ಕಾಲದಲ್ಲಿ ಸಂಗೀತ, ಸಾಹಿತ್ಯ, ನೃತ್ಯ ಕಲೆಗಳು ಪ್ರಾಮುಖ್ಯತೆ ಪಡೆದುವು. ಬೇಲೂರಿನ ಚೆನ್ನಕೇಶವ ದೇವಾಲಯ ಎಲ್ಲ ಕಲೆಗಳ ಮುಖ್ಯ ಕೇಂದ್ರವಾಗಿತ್ತು.

ವಿಷ್ಣುವರ್ಧನನ ಪಟ್ಟದ ರಾಣಿಯಾಗಿದ್ದ ಶಾಂತಲಾದೇವಿ ಪ್ರಸಿದ್ಧ ನರ್ತಕಿ. ಆಕೆ ನೃತ್ಯ ಸರಸ್ವತಿ ಎನಿಸಿದ್ದಳು. ಚೆನ್ನಕೇಶವ ದೇವಾಲಯದ ರಂಗ ಮಂಟಪದಲ್ಲಿ ಶಾಂತಲಾದೇವಿ ನೃತ್ಯ ಮಾಡುತ್ತಿದ್ದಳಂತೆ.

ಹೊಯ್ಸಳರ ಗುರಿ ಕೇವಲ ನಾಡನ್ನು ವಿಸ್ತರಿಸುವುದಾಗಿರಲಿಲ್ಲ. ಅವರ ಗುರಿ ನಾಡನ್ನು ಕಟ್ಟುವುದಾಗಿತ್ತು. ಜನರನ್ನು ಬಲಶಾಲಿಗಳನ್ನಾಗಿ, ವಿದ್ಯಾವಂತರನ್ನಾಗಿ ಮಾಡುವುದು ಅವರ ಗುರಿಯಾಗಿತ್ತು. ಜನಜೀವನ ಚೆನ್ನಾಗಬೇಕೆಂಬುದು ಅವರ ಆಸೆಯಾಗಿತ್ತು. ಆದಕಾರಣ ಅವರಿಗೆ ಪ್ರಜೆಗಳ ಬೆಂಬಲವೂ ಇತ್ತು.

ಹೊಯ್ಸಳರು ಕವಿಗಳಿಗೆ ಆಶ್ರಯ ಕೊಟ್ಟು ಪ್ರೋತ್ಸಾಹಿಸುತ್ತಿದ್ದರು. ಇವರ ಕಾಲದಲ್ಲಿ ಹೆಸರಾಂತ ಕವಿಗಳು ಇದ್ದರು. ಸಂಸ್ಕೃತಿಯ ಪ್ರಸಾರ ನಾಡಿನ ಮೂಲೆಮೂಲೆಗಳಲ್ಲಿ ಹರಡಿತು.

ಧರ್ಮ ಸಾಮರಸ್ಯಕ್ಕೆ ಹೊಯ್ಸಳರು ಮತ್ತೊಂದು ಹೆಸರು. ದುಷ್ಟರನ್ನು ಶಿಕ್ಷಿಸಿ, ಒಳ್ಳೆಯವರನ್ನು ಕಾಪಾಡುವುದು ರಾಜ್ಯಭಾರದ ಗುರಿಯಾಗಿತ್ತು. ವಿಷ್ಣುವರ್ಧನ ಎಲ್ಲ ಮತಗಳನ್ನೂ ಗೌರವಿಸುತ್ತಿದ್ದ. ಅವುಗಳಿಗೆ ಪ್ರೋತ್ಸಾಹ ಕೊಡುತ್ತಿದ್ದ. ಇವನು ವೈಷ್ಣವ. ಆದರೂ ಜೈನ, ಶೈವ ದೇವಾಲಯಗಳನ್ನು ಕಟ್ಟಿಸಿದನು. ಇದು ಅವನ ಎಲ್ಲ ಧರ್ಮಗಳ ಪ್ರೀತಿಗೆ ಮಾದರಿ ಆಯಿತು. ಇವನ ಕಾಲದಲ್ಲಿ ಪದೇ ಪದೇ ಯುದ್ಧಗಳು ಆಗುತ್ತಿದ್ದರೂ ರಾಜ್ಯವು ಶಾಂತಿ ಸಂಪತ್ತಿನಿಂದ ಕೂಡಿತ್ತು. ಜನಜೀವನದಲ್ಲಿ ನೆಮ್ಮದಿ ಇತ್ತು. ಆ ಕಾರಣದಿಂದ ಕಲೆ ಬೆಳೆಯಿತು. ಮೊದಲು ಜೈನನಾಗಿದ್ದ ವಿಷ್ಣುವರ್ಧನ ಅನಂತರ ವೈಷ್ಣವನಾದ. ಶಾಂತಲಾದೇವಿ ಜೈನಧರ್ಮವನ್ನು ಸ್ವೀಕರಿಸಿದ್ದಳು. ಗಂಡ ಹೆಂಡತಿಯರಲ್ಲೇ ಬೇರೆ ಬೇರೆ ಮತಗಳ ಆಚರಣೆ ಇತ್ತು. ಅದು ಅವರ ಮುಕ್ತ ಮನಸ್ಸನ್ನೂ ಧಾರ್ಮಿಕ ಸ್ವಾತಂತ್ರ್ಯವನ್ನೂ ತೋರಿಸುತ್ತದೆ. ಧರ್ಮ ಕೇವಲ ಆಚರಣೆ ಆಗಿರಲಿಲ್ಲ. ಅದು ಅಂತರಾತ್ಮವನ್ನು ಕಾಣುವುದಾಗಿತ್ತು. ಅನಂತರ ವೀರಶೈವ ಧರ್ಮ ಹೊಯ್ಸಳ ರಾಜ್ಯದಲ್ಲಿ ಹನ್ನೆರಡನೆಯ ಶತಮಾನದಲ್ಲಿ ಕಾಲಿಟ್ಟಿತು. ಎಲ್ಲ ಧರ್ಮದವರೂ ತಮಗೆ ಇಷ್ಟವಾದ

ದೇವಾಲಯಗಳನ್ನು ಕಟ್ಟಿಕೊಳ್ಳುವ ಅವಕಾಶ ಇತ್ತು. ಅವುಗಳ ಬೆಳವಣಿಗೆಗೆ ದಾನ ದತ್ತಿ ಬಿಡುತ್ತಿದ್ದರು. ರಾಮಾನುಜಾಚಾರ್ಯರು ವಿಷ್ಣುವರ್ಧನನ ಕಾಲದಲ್ಲಿ ನಮ್ಮ ಕರ್ನಾಟಕಕ್ಕೆ ಬಂದರು. ಅವರ ಮೂಲಸ್ಥಳ ತಮಿಳುನಾಡು. ಅವರ ಪ್ರಭಾವದಿಂದ ವೈಷ್ಣವ ಧರ್ಮವು ಹೊಯ್ಸಳ ಸಾಮ್ರಾಜ್ಯದಲ್ಲಿ ಪ್ರಸಿದ್ಧಿ ಪಡೆಯಿತು.

ಹೊಯ್ಸಳರ ಕಾಲದಲ್ಲಿ ಆಡಳಿತವು ಉತ್ತಮವಾಗಿತ್ತು. ಹಳ್ಳಿಗಳ ಬೆಳವಣಿಗೆಗೆ ಹೆಚ್ಚು ಗಮನ ಕೊಟ್ಟಿದ್ದರು. ಆ ರಾಜ್ಯದಲ್ಲಿ ಹೆಚ್ಚಾಗಿ ಇದ್ದುದು ಗ್ರಾಮ, ಅಗ್ರಹಾರ ಹಾಗೂ ಪಟ್ಟಣಗಳು. ಸ್ಥಳೀಯ ಆಡಳಿತವನ್ನು ಆಯಾ ಗ್ರಾಮದ ಜನರಿಗೇ ಬಿಟ್ಟಿದ್ದರು.ಹಳ್ಳಿಗಳ ಆಡಳಿತ ನೋಡಿಕೊಳ್ಳುವವನು ಗಾವುಂಡ. ಇವನನ್ನು ಹೆಗ್ಗಡೆ, ಮೂಲಿಗ ಎಂದು ಕರೆಯುತ್ತಿದ್ದರು. ಕಂದಾಯ ವಸೂಲಿ ಮಾಡುವುದು, ಅದನ್ನು ಸಾರ್ವಜನಿಕ ಕೆಲಸಗಳಿಗೆ ವಿನಿಯೋಗಿಸುವುದು ಆಯಾ ಗ್ರಾಮಸಭೆಯ ಕೆಲಸವಾಗಿತ್ತು. ನೇರವಾಗಿ ಲೆಕ್ಕ ಪತ್ರಗಳನ್ನು ಇಡುವವರು ಇರುತ್ತಿದ್ದರು. ಇವರನ್ನು ಸೇನಬೋವ ಎಂದು ಕರೆಯುತ್ತಿದ್ದರು. ಇವರಿಗೆ ಮತ್ತೊಂದು ಹೆಸರು ಕುಲಕರಣಿ ಎಂದು. ಈಚಿನ ಕಾಲದಲ್ಲಿ ಶಾನುಭೋಗ ಎಂದು ಕರೆಯುತ್ತಿದ್ದುದು ಇವನನ್ನೇ. ತೋಟಿಗ, ಕಮ್ಮಾರ, ಅಕ್ಕಸಾಲಿಗ, ಬಡಗಿ, ಕಲ್ಕುಟಿಗ, ಕ್ಷೌರಿಕ, ಬಾರಿಕ - ಇವರು ಕೆಳ ಹಂತದ ಅಧಿಕಾರಿಗಳು. ಇವರು ಅವರವರ ಕೆಲಸಗಳನ್ನು ನೋಡಿಕೊಳ್ಳುತ್ತಿದ್ದರು. ಹಳ್ಳಿ ಹಳ್ಳಿಗಳ ನಡುವೆ ವಿರೋಧ ಬಂದರೆ ಹತ್ತಾರು ಗ್ರಾಮದ ಮುಖಂಡರು ಸಭೆ ಸೇರಿ ನ್ಯಾಯ ಮಾಡುತ್ತಿದ್ದರು. ಅದನ್ನು ರಾಜರು, ಮಂತ್ರಿಗಳು ಒಪ್ಪುತ್ತಿದ್ದರು. ವ್ಯವಸಾಯಕ್ಕೆ ಬೇಕಾದ ಸಹಾಯ ದೊರಕುತ್ತಿತ್ತು. ಕೆರೆಗಳನ್ನು ಕಟ್ಟಿಸುವ, ಕಾಲುವೆಗಳನ್ನು ತೋಡಿಸುವ ಕೆಲಸ ನಡೆಯುತ್ತಿತ್ತು. ಹೊಸಗ್ರಾಮಗಳನ್ನು ಕಟ್ಟಲು ಕಾಡುಗಳನ್ನು ಕಡಿಯುತ್ತಿದ್ದರು. ವ್ಯಾಪಾರಿಗಳು ದಿನಸಿ, ಬಟ್ಟೆ, ದನಕರುಗಳ ವ್ಯಾಪಾರ ಮಾಡುತ್ತಿದ್ದರು. ರಾಜ್ಯದ ಬೆಳವಣಿಗೆಗೆ ಇವೆಲ್ಲ ಸಹಕಾರಿಯಾಗಿದ್ದವು.

ಊರಿನ ಜೀವನ ಕೇಂದ್ರ ದೇವಾಲಯವಾಗಿತ್ತು. ತಮ್ಮ ಕೆಲಸ ಮುಗಿದ ಮೇಲೆ ಜನರು ಅಲ್ಲಿ ಸೇರುತ್ತಿದ್ದರು. ಅದು ಅವರ ಪಾಠಶಾಲೆ ಹಾಗೂ ಅವರ ನ್ಯಾಯ ಸ್ಥಳವಾಗಿತ್ತು. ಅಲ್ಲಿ ಕಥೆಕೇಳುವುದು, ಭಜನೆ, ಸಂಗೀತ, ನರ್ತನ ಈ ಎಲ್ಲವೂ

ನಡೆಯುತ್ತಿತ್ತು. ಊರಿನ ಯೋಗಕ್ಷೇಮವನ್ನು ಅಲ್ಲಿಯೇ ಮಾತನಾಡುತ್ತಿದ್ದರು. ಹೀಗೆ ಮನೆಗಿಂತ ಹೆಚ್ಚಾಗಿ ದೇವಸ್ಥಾನ ಅವರಿಗೆ ಪ್ರಿಯವಾದ ಜಾಗವಾಗಿತ್ತು. ಅದು ಸುಖ ಸಂತೋಷಗಳಿಗೆ ಹೇಗೋ ಹಾಗೆಯೇ ದುಃಖದಲ್ಲಿ, ಕಷ್ಟಕಾಲದಲ್ಲಿ ಧೈರ್ಯ ತುಂಬುವ ಸ್ಥಳವಾಗಿತ್ತು.

ಹೊಯ್ಸಳರ ಕಾಲದ ಜನಜೀವನ ಚೆನ್ನಾಗಿಯೂ, ಕಲಾತ್ಮಕವಾಗಿಯೂ ಇತ್ತು. ಉತ್ಸಾಹದಿಂದ ತುಂಬಿ ಶ್ರೀಮಂತವಾಗಿತ್ತು, ಸ್ನೇಹಮಯವಾಗಿತ್ತು. ಇದು ಅಂದು ಕೆತ್ತಿರುವ ಶಿಲ್ಪಗಳಲ್ಲಿಯೂ ಕಂಡುಬರುತ್ತದೆ. ಶೈವ ಮತ್ತು ವೈಷ್ಣವ ಧರ್ಮದ ಚಿತ್ರಗಳನ್ನು ಒಟ್ಟೊಟ್ಟಿಗೆ ಕೆತ್ತಿರುವುದು ಅವರ ಧರ್ಮ ಸಮಾನತೆಗೆ ಸಾಕ್ಷಿ. ಭವಿಷ್ಯವನ್ನು ನುಡಿವ ಶಿಲ್ಪಗಳು ಅಲ್ಲಿವೆ. ಪರಶಿವ ಬಲಗೈಯ್ಯಲ್ಲಿ ಆಧುನಿಕ 'ಗೇರ್ ವೀಲ್' ಹಿಡಿದಿರುವುದನ್ನು ಕೆತ್ತಲಾಗಿದೆ. ಜೇನುತಡಿ ಸವಾರರು ಬೂಡ್ಸು ಧರಿಸಿರುವುದು ತೋರುತ್ತದೆ. ಕೆಲವು ಚಿತ್ರಗಳು ನಿಲುವಂಗಿಯನ್ನೂ, ಸೊಂಟಪಟ್ಟಿಯನ್ನು ಧರಿಸಿವೆ. ರಥಗಳಿಗೆ ಸ್ಪ್ರಿಂಗ್ ಹಾಕಿರುವ ಚಕ್ರಗಳಿವೆ. ಒಂದು ವಿಗ್ರಹ ಗುಂಡಿಗಳನ್ನು ಹಾಕಿದ ನಿಲುವಂಗಿಯನ್ನು ತೊಟ್ಟುಕುಳಿತಿದೆ. ಬೋಲ್ಟು, ನಟ್ಟುಗಳ ಆಕಾರದ ಕೆತ್ತನೆಗಳಿವೆ. ಯುದ್ಧಭೂಮಿಯಲ್ಲಿ ಸೈನಿಕನೊಬ್ಬ ಕೋಲಿನಂತೆ ಉದ್ದವಾಗಿರುವ ಒಂದು ವಸ್ತುವನ್ನು ಕೈಯಲ್ಲಿ ಹಿಡಿದು ಅದರೊಳಗಿಂದ ನೋಡುತ್ತಿರುವಂತೆ ಇದೆ. ಇದು ದೂರ ದರ್ಶಕ ಯಂತ್ರ ಇರಬಹುದೆಂದು ಊಹಿಸಬಹುದು. ಅಲ್ಲದೆ ಅನೇಕ ಚಿತ್ರಗಳಲ್ಲಿ ಹೆಂಗಸರು, ಗಂಡಸರು ತೊಡುತ್ತಿದ್ದ ಒಡವೆಗಳು ಕಂಡುಬರುತ್ತವೆ.

ಅಂದಿನ ಜನ ಸುಖಕ್ಕೆ ಆದ ಹಾಗೆ ಕಷ್ಟಕ್ಕೂ ಆಗುತ್ತಿದ್ದರು. ಒಡೆಯನ ಜೀವವನ್ನು ಕಾಪಾಡಲು ಜೀವಕೊಟ್ಟ ವೀರರ ಉದಾಹರಣೆಗಳು ಸಾಕಷ್ಟು ಇವೆ. ಹೆಂಗಸರು ಯಾವ ಆತಂಕಗಳೂ ಇಲ್ಲದೆ ಸಂತೋಷದಿಂದ ಬದುಕುತ್ತಿದ್ದರು.

ವಿದ್ಯಾವಂತ ಹೆಂಗಸರಿಗೆ ಜವಾಬ್ದಾರಿಯ ಸ್ಥಾನ ಕೊಡುತ್ತಿದ್ದರು. ವಿಷ್ಣುವರ್ಧನನು ತನ್ನ ಪಟ್ಟದರಾಣಿ ಶಾಂತಲಾದೇವಿಯ ಅಭಿಪ್ರಾಯ ಕೇಳದೇ ಯಾವ

ಕೆಲಸಕ್ಕೂ ಕೈ ಹಾಕುತ್ತಿರಲಿಲ್ಲ. ಬೊಮ್ಮಳದೇವಿಯು ಸೈನ್ಯಕ್ಕೆ ಕುದುರೆಗಳನ್ನು ತರಪೇತು ಮಾಡುವ ಶಿಕ್ಷಣಶಾಲೆ ನಡೆಸುತ್ತಿದ್ದಳು. ಎರಡನೇ ಬಲ್ಲಾಳನ ರಾಣಿ ಉಮಾದೇವಿಯು ಗಂಡನೊಂದಿಗೆ ವಿಜಯ ಯಾತ್ರೆಗಳಲ್ಲಿ ಭಾಗವಹಿಸುತ್ತಿದ್ದಳು. ಅಲ್ಲದೆ ಸಂಗೀತ, ನೃತ್ಯ, ಸಾಹಿತ್ಯ, ಲಲಿತಕಲೆಗಳಲ್ಲಿ ಹೆಂಗಸರು ತಮ್ಮ ಅಭಿರುಚಿಯನ್ನು ತೋರಿಸುತ್ತಿದ್ದರು. ವೀಣೆ ನುಡಿಸುವ ಕೈ ಸಮಯ ಬಂದಾಗ ಕತ್ತಿಯನ್ನು ಹಿಡಿಯುತ್ತಿತ್ತು. ಇವು ಹೆಂಗಸು ಗಂಡಸರಲ್ಲಿದ್ದ ಸಮಾನತೆಯನ್ನು ಸೂಚಿಸುತ್ತದೆ.

ಹೀಗೆ ಸುಮಾರು ನಾಲ್ಕು ನೂರು ವರ್ಷಗಳು ಆಳಿದ ಹೊಯ್ಸಳ ಸಾಮ್ರಾಜ್ಯವು ಇಂದಿಗೂ ನಮ್ಮ ನೆನಪಿನಲ್ಲಿ ಉಳಿದಿದೆ. ಕರ್ನಾಟಕ ಸಂಸ್ಕೃತಿಯ ಬೆಳವಣಿಗೆಗೆ ಹೋಲಿಕೆಯೇ ಇಲ್ಲದ ಕಾಣಿಕೆ ಸಲ್ಲಿಸಿದೆ. ಇವರ ಕಾಲದಲ್ಲಿ ಒಳಜಗಳಗಳು ಇರಲಿಲ್ಲ. ಸಿಂಹಾಸನಕ್ಕಾಗಿ ತಮ್ಮ ತಮ್ಮೊಳಗೆ ಕಾದಾಟವಿರಲಿಲ್ಲ. ಮಂತ್ರಿಗಳು, ಸೈನಿಕರು ರಾಜನೀತಿಗೆ ವಿರೋಧವಾಗಿ ನಡೆದುಕೊಳ್ಳುತ್ತಿರಲಿಲ್ಲ. ರಾಜನ, ಮಂತ್ರಿಗಳ, ದಂಡನಾಯಕರ, ಸೈನಿಕರ ಹಾಗೂ ಪ್ರಜೆಗಳ ನಡುವೆ ನಂಬುಗೆ ಇತ್ತು. ರಾಜ ಐದುಜನ ಮಂತ್ರಿಗಳ ಅಭಿಪ್ರಾಯವನ್ನು ಮನ್ನಣೆಮಾಡುತ್ತಿದ್ದ. ಮತ-ಧರ್ಮಗಳ ಬಗ್ಗೆ ಇದ್ದ ಉದಾರ ಮನೋಭಾವ, ವಿಶಾಲ ದೃಷ್ಟಿ ರಾಜ್ಯದ ಬೆಳವಣಿಗೆಗೆ ಸಹಕಾರಿಯಾಗಿತ್ತು. ಇವರ ಆಡಳಿತ ಆದಮೇಲೆ ವಿಜಯನಗರ ಸಾಮ್ರಾಜ್ಯ ಹುಟ್ಟಿಕೊಂಡಿತು.

ನಾನು ಮೊದಲೇ ಹೇಳಿದ ಹಾಗೆ ಬೇಲೂರು, ಹಳೇಬೀಡು, ಸೋಮನಾಥಪುರ ಕಲ್ಲಿನ ಕೆತ್ತನೆಗೆ ಹೆಸರುವಾಸಿಯಾಗಿವೆ. ಕಲ್ಲಿನಲ್ಲಿ ಕಲೆ ಹೂವಾಗಿ ಅರಳಿದೆ! ಊಹೆಗೂ ನಿಲುಕದಷ್ಟು ಕುಸುರಿ ಕೆಲಸ ಅಲ್ಲಿ ನಡೆದಿದೆ. ಕಲಾಕೃತಿಗಳನ್ನು ಕಡೆಯುವಲ್ಲಿ ಅವರು ತೋರಿರುವ ಜಾಣತನ ಅಮರವಾದುದು. ಬೇಲೂರಿನ ದೇವಾಲಯವನ್ನು ವಿಷ್ಣುವರ್ಧನ ಕಟ್ಟಿಸಿದ. ಅವನ ದಂಡನಾಯಕ ಕೇತುಮಲ್ಲ ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯವನ್ನು ಕಟ್ಟಿಸಿದ. ಸೋಮನಾಥಪುರದ ಕೇಶವ ದೇವಾಲಯವನ್ನು ಹೊಯ್ಸಳ ದಂಡನಾಯಕನಾದ ಸೋಮನಾಥನು ಕಟ್ಟಿಸಿದ. ಈ ದೇವಾಲಯಗಳನ್ನು ಕಟ್ಟಿಸಿದವರು ಒಬ್ಬರಲ್ಲ ; ಅನೇಕರು. ನೂರಾರು ಶಿಲ್ಪಿಗಳು ಹಗಲು ಇರುಳು ಎನ್ನದೆ ಕೆಲಸ ಮಾಡಿದ್ದಾರೆ.



ಹೊಯ್ಸಳೇಶ್ವರ ದೇವಾಲಯ

ಒಂದೊಂದು ಶಿಲ್ಪವನ್ನು ಕಡೆಯುವಲ್ಲಿ ಒಬ್ಬೊಬ್ಬ ಶಿಲ್ಪಿಯೂ ತನ್ನ ಜಾಣ್ಮೆಯನ್ನು ತೋರಿದ್ದಾನೆ. ತನ್ನ ಎಲ್ಲ ಬುದ್ಧಿವಂತಿಕೆಯನ್ನು ಬಳಸಿದ್ದಾನೆ. ಎಷ್ಟೋ ಕಲಾವಿದರು ಕೂಡಿ ಅವು ಸುಂದರವಾಗಲು ತಮ್ಮ ತಮ್ಮ ಕಾಣಿಕೆಗಳನ್ನು ಸಲ್ಲಿಸಿದ್ದಾರೆ.

ಈಗ ಬೇಲೂರು, ಹಳೇಬೀಡು ದೇವಾಲಯಗಳನ್ನು ಕುರಿತು ವಿವರವಾಗಿ ತಿಳಿಯೋಣ. ಅಲ್ಲಿಗೆ ಹೋಗೋಣವೆ ? ಸರಿ. ಅಲ್ಲಿಗೆ ಹೋಗುವ ಮುಂಚೆ ಅವುಗಳ ಬಗ್ಗೆ ಸ್ವಲ್ಪ ವಿವರ ಹೇಳುತ್ತೇನೆ, ಕೇಳಿ.

ಹಾಸನ ಜಿಲ್ಲೆಯಲ್ಲಿ ಎಂಟು ತಾಲ್ಲೂಕುಗಳಿವೆ. ಅದರ ಒಂದು ತಾಲೂಕು ಬೇಲೂರು. ಹಾಸನದಿಂದ ಚಿಕ್ಕಮಗಳೂರಿಗೆ ಹೋಗುವ ದಾರಿಯಲ್ಲಿ ಸಿಕ್ಕುತ್ತದೆ. ಹಾಸನದಿಂದ ಮೂವತ್ತಾರು ಕಿಲೋಮೀಟರ್ ದೂರದಲ್ಲಿದೆ. ಬೇಲೂರು ತಾಲೂಕಿನಲ್ಲಿ ಐದು ಹೋಬಳಿ ಇವೆ. ಅವುಗಳೆ ಚಿಕ್ಕೋಡು, ಬೇಲೂರು,ಕಸಲಾ, ಅರೆಹಳ್ಳಿ, ಮಾದಿಹಳ್ಳಿ ಮತ್ತು ಹಳೇಬೀಡು. ಬೇಲೂರು ತಾಲ್ಲೂಕಿನಲ್ಲಿ ಒಟ್ಟು ಮುನ್ನೂರು ಹಳ್ಳಿಗಳಿವೆ.

ತಾಲ್ಲೂಕಿನ ಪಶ್ಚಿಮ ಭಾಗ ಮಲೆನಾಡು. ಪೂರ್ವಭಾಗ ಅರೆಮಲೆನಾಡು. ಈ ತಾಲ್ಲೂಕಿನ ಮುಖ್ಯ ನದಿ ಯಗಚಿ. ಈಗ ಇದಕ್ಕೆ ಬೇಲೂರಿನ ಹತ್ತಿರ ಆಣೆಕಟ್ಟು ಕಟ್ಟಲಾಗುತ್ತಿದೆ. ಇದು ಬಾಬಾಬುಡನ್‌ಗಿರಿಯಲ್ಲಿ ಹುಟ್ಟುತ್ತದೆ. ಈ ತಾಲ್ಲೂಕಿನಲ್ಲಿ ಅರವತ್ತೇಳು ದೊಡ್ಡಕೆರೆಗಳೂ, ಅನೇಕ ಸಣ್ಣ ಕೆರೆಗಳೂ ಇವೆ. ಕಾಫಿ, ಬತ್ತ, ಮೆಣಸು, ಏಲಕ್ಕಿ, ಅಡಿಕೆ, ಕಬ್ಬು, ಆಲೂಗಡ್ಡೆ, ನೆಲಗಡಲೆ, ರಾಗಿ, ಮೆಣಸಿನಕಾಯಿ, ಪ್ರಮುಖ ಬೆಳೆಗಳು. ತರಕಾರಿ ಹಾಗೂ ಹಣ್ಣುಗಳನ್ನು ಬೆಳೆಯುತ್ತಾರೆ. ಅರಣ್ಯ ಇಲಾಖೆಯವರು ಗೇರುಬೀಜ ಬೆಳೆಯುತ್ತಾರೆ. ಮರ ಕೊಯ್ಯುವುದು, ವಿವಿಧ ವಸ್ತುಗಳ ತಯಾರಿಕೆ, ಜೇನು ಸಾಕಣೆ, ಗಾಣದ ಎಣ್ಣೆ ತಯಾರಿಕೆಗೆ ಹೆಸರು ವಾಸಿಯಾಗಿದೆ.

ಬಾಣಾವರ - ಬೇಲೂರು- ಮೂಡಿಗೆರೆ,- ಹಾಸನ - ಬೇಲೂರು ಚಿಕ್ಕಮಗಳೂರು, ಬಾಗೆ ಬೇವೂರು ಹಾಗೂ ಸಕಲೇಶಪುರ - ಬೇಲೂರು ಮಾರ್ಗಗಳು ಈ ತಾಲ್ಲೂಕಿನ ಮುಖ್ಯ ರಸ್ತೆಗಳು. ಈ ಎಲ್ಲ ಕಡೆಗಳಿಂದಲೂ ಬೇಲೂರಿಗೆ ಬರಬಹುದು.

ಸ್ಥಳ ಪುರಾಣ ಕಥೆಗಳಲ್ಲಿ ಹೇಳುವಂತೆ ಬೇಲೂರನ್ನು ಮೊದಲು ವೇಲಾಪುರ, ವೇಲೂರು ಎಂಬ ಹೆಸರುಗಳಿಂದ ಕರೆಯುತ್ತಿದ್ದರು. ಕೆಲವು ಶಾಸನಗಳಲ್ಲಿ ವೇಲಾಪುರ, ಬೇಲುಹೂರು ಎಂಬ ಹೆಸರುಗಳಿವೆ. ಇದನ್ನು ಅಭಿನವ ಭೂ ವೈಕುಂಠ, ದಕ್ಷಿಣದ ವಾರಣಾಸಿ ಎಂದೂ ಕರೆದಿದ್ದಾರೆ. ಸೊಸೆ ಊರಿನಿಂದ ಇಲ್ಲಿಗೆ ಬಂದನಂತರ ಬೇಲೂರು ಹೊಯ್ಸಳರ ರಾಜಧಾನಿಯಾಯಿತು. ವಿಷ್ಣುವರ್ಧನನು ರಾಜ್ಯ ವಿಸ್ತಾರ ಮಾಡಿದಾಗ ದೋರಸಮುದ್ರ ಅಂದರೆ ಈಗಿನ ಹಳೆಬೀಡು ಎರಡನೆಯ ರಾಜಧಾನಿಯಾಯಿತು.

ಈಗ ಬನ್ನಿ ಬೇಲೂರಿಗೆ ಹೋಗೋಣ. ದೇವಸ್ಥಾನವನ್ನು ಕಣ್ಣಾರೆ ಕಂಡು ಕಲಾ ಸೌಂದರ್ಯವನ್ನು ಸವಿಯೋಣ. ಇದು ಹಾಸನದ ಬಸ್ ನಿಲ್ದಾಣ. ಇಲ್ಲಿ ನಾವು ಚಿಕ್ಕಮಗಳೂರು ಕಡೆಗೆ ಹೋಗುವ ಬಸ್ಸಿನಲ್ಲಿ ಹತ್ತಬೇಕು. ಸುಮಾರು ಒಂದು ಗಂಟೆ ಪ್ರಯಾಣ. ಈಗ ಹದಿನಾರು ಕಿಲೋಮೀಟರ್ ದೂರಬಂದಿದ್ದೇವೆ. ಬಸ್ಸಿನ ಎಡಭಾಗದಲ್ಲಿ ನೋಡಿ. ಒಂದು ಬೋರ್ಡುಗಲ್ಲಿದೆ. ಓದಿ. ದೊಡ್ಡಗದ್ದುವಳ್ಳಿ ಎಂದು ಬರೆದಿದೆ. ರಸ್ತೆಯಿಂದ ಪಶ್ಚಿಮಕ್ಕೆ ಸುಮಾರು ಎರಡು ಕಿಲೋಮೀಟರ್ ದೂರ ಹೋದರೆ ಅಲ್ಲಿ ಲಕ್ಷ್ಮೀದೇವಾಲಯ ಇದೆ. ವಿಷ್ಣುವರ್ಧನನ ಕಾಲದಲ್ಲಿ ಕಟ್ಟಿಸಿದ್ದು. ಇದು ನಾಲ್ಕು ದೇವಾಲಯಗಳು ಸೇರಿರುವುದಕ್ಕೆ ಉದಾಹರಣೆ. ಎಂದರೆ ಇದು ನಾಲ್ಕು ಗರ್ಭಗುಡಿಗಳಿರುವ ಒಂದೇ ಗುಡಿ. ಹೊಯ್ಸಳರ ದೇವಾಲಯಗಳಲ್ಲಿ ಒಂದು ಗರ್ಭಗುಡಿ ಇರುವ ಹಾಗೆ ಎರಡು, ಮೂರು, ನಾಲ್ಕು, ಐದು ಗರ್ಭಗುಡಿಗಳಿರುವ ಗುಡಿಗಳೂ ಇವೆ. ದೊಡ್ಡಗದ್ದುವಳ್ಳಿಯ ನಾಲ್ಕು ಗರ್ಭಗುಡಿಗಳಲ್ಲಿ ಕಾಳಿ, ಲಿಂಗ, ಲಕ್ಷ್ಮೀ ಮತ್ತು ವಿಷ್ಣು ಮೂರ್ತಿಗಳಿವೆ. ಲಕ್ಷ್ಮೀ ವಿಗ್ರಹ ತುಂಬಾ ಸುಂದರವಾದ ಕೆತ್ತನೆಯಿಂದ ಕೂಡಿದೆ. ಇದು ಬೇಲೂರು ದೇವಾಲಯಕ್ಕಿಂತ ಮುಂಚೆ ಕಟ್ಟಿದ ದೇವಾಲಯ. ಲಕ್ಷ್ಮಿಯ ವಿಗ್ರಹ ಈಗ ಅಲ್ಲಿ ಇಲ್ಲ.

ಬೇಲೂರು ಬಸ್ ನಿಲ್ದಾಣ ಬಂದೇ ಬಿಟ್ಟಿತು. ಇಳಿಯಬೇಡಿ ಇಳಿಯಬೇಡಿ. ಬಸ್ಸು ದೇವಸ್ಥಾನದ ಹತ್ತಿರಕ್ಕೇ ಹೋಗುತ್ತದೆ. ಅಲ್ಲೇ ಇಳಿಯೋಣ. ಇಲ್ಲಿಂದ ಅರ್ಧ ಕಿಲೋಮೀಟರ್ ದೂರ ಅಷ್ಟೆ. ಈಗ ನೀವು ದೇವಾಲಯದ ಹತ್ತಿರ ಬಂದಿದ್ದೀರಿ. ಈಗ ಇಳಿಯಿರಿ. ಇದೇ ನೋಡಿ ಚೆನ್ನಕೇಶವ ದೇವಾಲಯ. . ಈಗ ನೀವು ಗಮನವಿಟ್ಟು

ದೇವಸ್ಥಾನದ ಶಿಲ್ಪಕಲೆಯನ್ನು ಗಮನಿಸಬೇಕು.

ನೋಡಿ, ಇದು ಏಳು ಅಂತಸ್ತಿನ ಗೋಪುರ. ಇದರ ಮೂಲಕವೇ ದೇವಸ್ಥಾನದ ಒಳಗೆ ಹೋಗಬೇಕು. ಕಲ್ಲು ಬುರಿಗೆಯ ಗಂಗಾ ಸಾಲಾರನು ಈ ಗೋಪುರವನ್ನು ಸುಟ್ಟು ಹಾಕಿದನಂತೆ. ಇದನ್ನು ಇಮ್ಮಡಿ ಹರಿಹರನ ದಂಡನಾಯಕ ಗುಂಡನು ಮತ್ತೆ ಕಟ್ಟಿಸಿದ ಎಂದು ಶಾಸನದಲ್ಲಿ ಬರೆದಿದೆ. ಈ ಗೋಪುರದ ಬಲಕ್ಕೆ ಇರುವ ದ್ವಾರಕ್ಕೆ ಆನೆ ಬಾಗಿಲು ಎಂದು ಹೆಸರು. ನೋಡಿ ಈ ಗೋಪುರದಲ್ಲಿ ಅನೇಕ ವಿಗ್ರಹಗಳಿವೆ. ಈ ಗೋಪುರ ವಿಜಯನಗರದ ಅರಸರ ಕಾಲದಲ್ಲಿ ಕಟ್ಟಿದ್ದು.

ಈ ದೇವಸ್ಥಾನ ವಿಶಾಲವಾಗಿದೆ. ಇಲ್ಲಿ ಎರಡು ಮುಖ್ಯ ದೇವಸ್ಥಾನಗಳಿವೆ. ಚೆನ್ನಕೇಶವ ದೇವಸ್ಥಾನ ಹಾಗೂ ಕಪ್ಪೆಚನ್ನಿಗರಾಯ ದೇವಸ್ಥಾನದ ಮುಂದೆ ಇರುವುದು ಗರುಡಗುಡಿ. ಇದರ ಪಕ್ಕದಲ್ಲಿ ಇರುವುದೇ ದೀಪದಕಂಬ. ಈಗ ಮುಖ್ಯ ದೇವಾಲಯಕ್ಕೆ ಹೋಗೋಣ. ಇದು ಕೇಶವ ದೇವಾಲಯ. ಮೂರು ಗರ್ಭಗುಡಿಗಳು ಇವೆ. ಇದರ ತಳಭಾಗ ನಕ್ಷತ್ರದ ಆಕಾರದಲ್ಲಿ ಇದೆ. ಇದರಲ್ಲಿ ಮುವತ್ತೆರಡು ಮೂಲೆಗಳಿವೆ. ಈ ರೀತಿ ಕಟ್ಟುವುದರಿಂದ ಕೆಲವು ಅನುಕೂಲಗಳಿವೆ. ಉದ್ದ ಜಾಸ್ತಿ ಆಗುತ್ತದೆ. ಗೋಡೆ ಪಟ್ಟಿ ಹೆಚ್ಚಾಗುತ್ತದೆ. ನೆರಳು _ ಬೆಳಕು ಚೆನ್ನಾಗಿ ಬಿದ್ದು ವಿಗ್ರಹಗಳು ಹೆಚ್ಚು ಸುಂದರವಾಗಿ ಕಾಣುತ್ತವೆ. ಇದು ಜಗಲಿ. ಪ್ರದಕ್ಷಿಣೆ ಹಾಕಲು ಇದನ್ನು ಬಳಸುತ್ತಾರೆ. ಜಗಲಿಯ ತಳಭಾಗದಲ್ಲಿ ಸುತ್ತಲೂ ಕೆತ್ತನೆಮಾಡಿದ್ದಾರೆ.



ಈಗ ಈ ದೇವಾಲಯದ ಬಗೆಗೆ ಮುಖ್ಯವಾದದ್ದನ್ನು ಹೇಳುತ್ತೇನೆ. ಆಮೇಲೆ ನೀವು ನೋಡಿ ಬರುವಿರಂತೆ. ಹೊರಗೆ ಬಾಗಿಲಬಳಿ ಸಳನು ಹುಲಿಯನ್ನು ಕೊಲ್ಲುತ್ತಿರುವ ಶಿಲ್ಪ ಎರಡು ಬದಿಯಲ್ಲೂ ಇದೆ. ಜಗಲಿಯಿಂದ ಐದು ಅಡಿವರೆಗೆ ಎಂಟು ಸಾಲು ಚಿತ್ರಪಟ್ಟಿಕೆಗಳಿವೆ. ಕೆಳಗಿನಿಂದ ನೋಡಿದರೆ ಒಂದನೆಯ ಸಾಲು ಆನೆಗಳು. ಎರಡನೆಯ ಸಾಲು ಮಣಿ ತೋರಣ. ಇವುಗಳ ಮಧ್ಯೆ ಸಿಂಹಗಳ ಚಿತ್ರ ಇದೆ. ಮೂರನೆಯ ಸಾಲು ಬಳ್ಳಿಗಳು. ಇವುಗಳ ಮಧ್ಯೆ ನಾನಾಬಗೆಯಲ್ಲಿ ನಿಂತಿರುವ ವಿಗ್ರಹಗಳು. ನಾಲ್ಕನೆ ಸಾಲು

ಮಣಿ ತೋರಣ. ಐದನೆ ಸಾಲು ಮುಂದಕ್ಕೆ ಚಾಚಿರುವ ಸಣ್ಣಗೂಡುಗಳು. ಗೂಡುಗಳ ಮಧ್ಯ ಯಕ್ಷ ವಿಗ್ರಹಗಳು. ಆರನೆ ಸಾಲು ಗಿಡ್ಡಾದ ಕಂಬಗಳು ಮಧ್ಯೆ ಹೆಂಗಸಿನ ವಿಗ್ರಹಗಳು. ಏಳನೆ ಸಾಲು ಸೂರುಗಲ್ಲು. ಅದಕ್ಕೆ ಮಣಿ ತೋರಣ. ಸೂರಿನ ಮೇಲೆ ಇಳಿಜಾರಾದ ಜಾಗದಲ್ಲಿ ಉದ್ದಕ್ಕೂ ಬಳ್ಳಿ. ಅದರ ಮೇಲೆ ಸಣ್ಣ ಸಣ್ಣ ಗೋಪುರಗಳು, ಸಿಂಹಗಳು ಮತ್ತು ಚೆಲುವಾದ ಸಣ್ಣ ವಿಗ್ರಹಗಳು. ಎಂಟನೆಯ ಸಾಲು ಕಟಾಂಜನ ಇದೆ. ಕಟಾಂಜನ ಎಂದರೆ ಕಟಕಟೆ.

ದೇವಾಲಯದಲ್ಲಿ ಸುಮಾರು ಮೂರು ಸಾವಿರಕ್ಕೂ ಹೆಚ್ಚು ದೊಡ್ಡ ವಿಗ್ರಹಗಳಿವೆ. ಪಟ್ಟಿಕೆಗಳಲ್ಲಿರುವ ವಿಗ್ರಹಗಳು ಸುಮಾರು ಹತ್ತು ಸಾವಿರ ಆಗುವುವು. ಇವುಗಳಲ್ಲಿ ನಲವತ್ತೆರಡು ಮದನಿಕೆಯರ ವಿಗ್ರಹಗಳಿವೆ. ಅವು ತುಂಬ ಚೆಲುವಾಗಿವೆ. ಇವು ಎಲ್ಲರ ಮನಸ್ಸನ್ನೂ ತಮ್ಮ ಕಡೆಗೆ ಸೆಳೆದುಕೊಳ್ಳುತ್ತವೆ.

ದೇವಸ್ಥಾನದ ಬಲಕ್ಕೆ ಹತ್ತು, ಎಡಕ್ಕೆ ಹತ್ತು ಜಾಲಂದ್ರಗಳಿವೆ. ಇವುಗಳಲ್ಲಿ ಹೂ ಬಳ್ಳಿಗಳನ್ನು, ಕ್ಷೀರಸಾಗರತೀರ್ಥ, ವಾಮನ ಅವತಾರ, ಕಾಳಿಂಗಮರ್ಧನ, ವಿಷ್ಣುವರ್ಧನನ ಆಸ್ಥಾನ, ಹಿರಣ್ಯಕಶಿಪು ಸಂಹಾರ ಮುಂತಾದ ಪುರಾಣ ಕಥೆಗಳನ್ನು ಕೆತ್ತಿದ್ದಾರೆ. ಹಾಗೆ ತ್ರಿವಿಕ್ರಮನ ಅವತಾರ, ಕಾಳೀಯ ಮರ್ಧನ, ಶಿವನದರ್ಬಾರು, ಕೃಷ್ಣನ ಲೀಲೆಗಳು, ಆದಿಶೇಷನ ಮೇಲೆ ಮಲಗಿರುವ ರಂಗನಾಥ, ಗರುಡನೂ ಹನುಮಂತನೂ ಯುದ್ಧಮಾಡುತ್ತಿರುವುದು, ವಿಷ್ಣು, ಪಾರ್ವತಿ, ರಾವಣ, ಬಲಿ ಮುಂತಾದ ಸುಂದರ ಚಿತ್ರಗಳಿವೆ.

ದೇವಸ್ಥಾನದ ಒಳಗೆ ಹೋಗುವ ಮುಂಚೆ ಇವನ್ನೆಲ್ಲಾ ನೋಡಿಕೊಂಡು ಬನ್ನಿ.

" ಬನ್ನಿ ನೋಡಿದಿರಾ?"

ನೋಡಿದೆವು. ಮದನಿಕೆ ಅಂದ್ರಲ್ಲಾ ಅವು ಚೆನ್ನಾಗಿವೆ. ಅವುಗಳ ಬಗ್ಗೆ ವಿವರವಾಗಿ ಹೇಳಿ ಸಾರ್.

" ಆಯ್ತು, ಬನ್ನಿ ಈ ಮದನಿಕೆಯರಲ್ಲಿ ವಿಶೇಷಗಳನ್ನು ಗಮನಿಸಿ"

## ಸುಂದರಿ ಮತ್ತು ಕನ್ನಡಿ

ಈ ಸುಂದರಿ ತನ್ನ ಚೆಲುವನ್ನು ಕನ್ನಡಿಯಲ್ಲಿ ನೋಡಿ ಆನಂದಿಸುತ್ತಿದ್ದಾಳೆ. ಅವಳ ಬಲಗಾಲಿನ ಹತ್ತಿರ ಒಂದು ಹೆಣ್ಣು ಕಪಿಯನ್ನು ಎತ್ತಿಕೊಂಡಿದೆ. ಕಪಿ ಏನನ್ನೋ ತಿನ್ನುತ್ತಿದೆ. ಇದು ಕಾಮದ ಆಕರ್ಷಣೆ.

## ಸುಂದರಿ ಮತ್ತು ಕಪಿ

ಕಪಿಯು ಯುವತಿಯ ವಸ್ತ್ರವನ್ನು ಎಳೆದು ಹಾಕಿ ಹಲ್ಲು ಕಿರಿಯುತ್ತಿದೆ. ಅದನ್ನು ಹೊಡೆಯಲು ಬಲಗೈಯಲ್ಲಿ ಮರದ ಕೊಂಬೆ ಹಿಡಿದಿರುವಳು. ಬಲಗೈ ಮೊಲೆಗಳನ್ನು ಮುಚ್ಚಿವೆ. ಇವಳ ರೂಪು ಆಕರ್ಷಕವಾಗಿದೆ. ರೂಪಾಕರ್ಷಿಣಿ.

## ಬೇಡತಿ

ಯುವತಿಯು ಎಡಗೈಯಲ್ಲಿ ಬಿಲ್ಲು ಹಿಡಿದಿದ್ದಾಳೆ. ಬಲಗೈಯಲ್ಲಿ ಬಾಣಹಿಡಿದು ಬಿಲ್ಲಿಗೆ ಹೂಡಿ ಕಿವಿಯವರೆಗೆ ಎಳೆದು ತೋರಣದ ಮೇಲಿರುವ ಎರಡು ಪಕ್ಷಿಗಳಿಗೆ ಗುರಿ ಇಟ್ಟಿರುವಳು. ಪಕ್ಕದಲ್ಲಿ ಸೇವಕಿ ಇರುವಳು. ಪಳಗಿದ ಜಿಂಕೆಯನ್ನೂ ಬಾಣಗಳನ್ನೂ ಹಿಡಿದಿರುವಳು. ರಸಾಕರ್ಷಿಣಿ.

## ಕೇಶಬಂಧ

ಯುವತಿಯ ಎಡಗೈಲಿ ತಲೆಗೂದಲನ್ನು ಹಿಡಿದಿರುವಳು. ಎಣ್ಣೆಗಾಗಿ ಬಲಗೈ ಚಾಚಿರುವಳು. ಅವಳ ಬಲಗಡೆ ಸೇವಕಿ ಎಣ್ಣೆ ಪಾತ್ರೆಯನ್ನೂ ಹೂವಿನ ಹಾರವನ್ನೂ ಹಿಡಿದಿರುವಳು. ಎಡಭಾಗದಲ್ಲಿ ನೋಡಿ. ಮತ್ತೊಬ್ಬಳು ಕನ್ನಡಿ ಹಿಡಿದಿರುವಳು. ಗಂಧಾಕರ್ಷಿಣಿ.



ದರ್ಪಣ ಸುಂದರಿ

## ಅದ್ಭುತ ನೃತ್ಯ

ಯುವತಿ ಡವಣೆಯನ್ನು ಹೊಡೆಯುತ್ತಿರುವಳು. ಅವಳ ಮೇಲ್ಭಾಗ ಎಡಕ್ಕೆ ತಿರುಗಿದೆ. ಕೆಳಭಾಗ ಬಲಕ್ಕೆ ತಿರುಗಿದೆ. ದೇಹದ ಭಾರ ಬಲಗಾಲಿನ ಮೇಲಿದೆ. ಎಡಗಾಲು ಕುಣಿಯಲು ಎತ್ತಿದೆ. ಚಿತ್ತಾಕರ್ಷಿಣಿ ಎಂದರೆ ಮನಸ್ಸು ಸೆಳೆವವಳು.

## ವೇಣುವಾದನ

ಯುವಕನು ಕೊಳಲನ್ನು ನುಡಿಸುತ್ತಾ ಕುಣಿಯುತ್ತಿರುವನು. ಪಕ್ಕದಲ್ಲಿ ಒಬ್ಬನು ಕೊಳಲನ್ನೂ ಬಾರಿಸುತ್ತಾ ಒಬ್ಬಳು ಹಾಡುತ್ತಾ ತಾಳಹಾಕುತ್ತಾ ಇರುವರು. ನಾಮಾಕರ್ಷಿಣಿ.

## ಗೀತ

ಸುಂದರಿಯು ಕೈಯಲ್ಲಿ ತಾಳ ಹಿಡಿದಿದ್ದಾಳೆ. ಎಡಗಾಲಿನ ಬೆರಳಿನಿಂದ ತಾಳ ಸೂಚಿಸಿದ್ದಾಳೆ. ಹಾಡಲು ಬಾಯಿ ತೆರೆದಿದ್ದಾಳೆ. ನೋಡಿ, ಬಾಯಿಯ ಹಲ್ಲುಗಳು ಕಾಣಿಸುತ್ತವೆ. ಪಕ್ಕದಲ್ಲಿ ಒಬ್ಬ ಕೊಳಲು, ಇಬ್ಬರು ಮೃದಂಗ, ಮತ್ತೊಬ್ಬ ಡವಣೆ ಹಿಡಿದಿದ್ದಾರೆ. ಬೀಜಾಕರ್ಷಿಣಿ.

## ಮೋಹಿನಿ ನೃತ್ಯ

ಇದೊಂದು ಒಳ್ಳೆಯ ಕಲಾಕೃತಿ. ಯುವತಿ ಬಲಗೈಯನ್ನು ತಲೆಮೇಲೆ ಎತ್ತಿದ್ದಾಳೆ. ಎಡಗೈಯನ್ನು ಸೊಂಟದ ಮೇಲೆ ಅಂಗೈ ಕಾಣುವಂತೆ ಹಿಡಿದಿದ್ದಾಳೆ. ಎಡಗಾಲು ಎತ್ತಿದ್ದಾಳೆ. ಎಡಗಡೆ ಒಬ್ಬ ಮೃದಂಗ ಬಾರಿಸುತ್ತ ಕುಣಿಯುತ್ತಿದ್ದಾನೆ. ನೋಡಿ ಅಲ್ಲಿ, ಲತಾ ತೋರಣದಲ್ಲಿ ಒಂದು ಹಲಸಿನ ಹಣ್ಣಿದೆ. ಅದರಮೇಲೆ ಒಂದು ನೊಣ ಕುಳಿತಿದೆ. ನೊಣ ತಿನ್ನಲು ಹಲ್ಲಿ ಬಂದಿದೆ. ನೊಣದ ರೆಕ್ಕೆಕೂಡ ಕಾಣುತ್ತೆ. ಗಮನಿಸಿ ನೋಡಿ ಕಾಣುತ್ತೆ. ಇದು ಆತ್ಮಾಕರ್ಷಿಣಿ.

## ರುದ್ರ ವೀಣಾಧಾರಿ

ಯುವತಿಯು ರುದ್ರವೀಣೆ ಹಿಡಿದು ಕುಣಿಯಲು ಶುರುಮಾಡಿದ್ದಾಳೆ. ಪಕ್ಕದಲ್ಲಿ ಮೃದಂಗ, ಡವಣೆ ನುಡಿಸುತ್ತಾ, ಹಾಡುತ್ತಾ, ತಾಳಹಾಕುವ ಹೆಂಗಸರು ಇದ್ದಾರೆ. ಅಮೃತಾಕರ್ಷಿಣಿ.

## ಪೂರ್ಣ ಮೋಹಿನಿ ನೃತ್ಯ

ಯುವತಿ ನಿಂತಿರುವ ರೀತಿ ಸುಂದರವಾಗಿದೆ. ಅಲ್ಲದೆ ಇದರಲ್ಲಿ ಒಂದು ಸೂತ್ರ ಇದೆ. ತಲೆಯಮೇಲೆ ನೀರು ಹಾಕಿದರೆ ಅದು ಮೂಗಿನ ತುದಿಗೆ ಬಿದ್ದು ಅಲ್ಲಿಂದ ಎಡಮೊಲೆಯ ತೊಟ್ಟಿಗೆ ಬಿದ್ದು ಅಲ್ಲಿಂದ ಎಡಗೈ ಹೆಬ್ಬಟ್ಟಿಗೆ ಬಿದ್ದು ಎಡಗಾಲಿನ ಹೆಬ್ಬಟ್ಟಿನ ಮೂಲಕ ನೆಲಕ್ಕೆ ಬೀಳುತ್ತದೆ. ಇದನ್ನು ಬ್ರಹ್ಮಸೂತ್ರ ಎಂದೂ ಕರೆಯುತ್ತಾರೆ.

## ಚೇಳು ಮತ್ತು ಯುವತಿ

ಸೀರೆಯಲ್ಲಿ ಸೇರಿದ್ದ ಚೇಳು ಕೊಡವಿದ್ದಾಳೆ. ನೋಡಿ ಅಲ್ಲಿ ಚೇಳು ಬಿದ್ದಿದೆ. ಸೀರೆ ಎಡತೊಡೆಯ ಮೇಲೆ ಬಿದ್ದಿದೆ. ಬೆತ್ತಲೆ ಆಗಿದ್ದಾಳೆ. ಮುಖದಲ್ಲಿ ಹೆದರಿದ ಭಾವನೆ ಗಮನಿಸಿ.

ಯುವತಿ ಕೈಗಳಿಂದಲೇ ಕೊಳಲು ಊದುತ್ತಿರುವ ಭಂಗಿ. ಎಡಗಡೆ ಒಂದು ಕಪಿ, ಬಲಗಡೆ ಕೊಳಲನ್ನು ಕೊಡುತ್ತಿರುವ ಹೆಂಗಸರು ಇದ್ದಾರೆ.

ಈ ಸುಂದರಿ ಎಡಗೈಯಲ್ಲಿ ಡಮರುಗಳನ್ನು ಬಲಗೈಲಿ ಚಿಟ್ಟಿತಾಳ ಹಿಡಿದಿದ್ದಾಳೇ. ಇಬ್ಬರು ಮೃದಂಗ ಬಾರಿಸುತ್ತಿದ್ದಾರೆ. ಕುಣಿಯುತ್ತಿರುವ ಭಂಗಿ ಗಮನಿಸಿ.

ಇಲ್ಲಿ ಯುವತಿಯ ಸೀರೆಯನ್ನು ಕಪಿ ಹಿಡಿದಿದೆ. ಮರದ ರೆಂಬೆಯಿಂದ ಅದನ್ನು ಓಡಿಸುತ್ತಿದ್ದಾಳೆ. ಪಕ್ಕದಲ್ಲಿರುವ ಹೆಂಗಸು ಹಣ್ಣು ಹಿಡಿದಿದ್ದಾಳೆ.

ಈ ಸುಂದರಿಯ ಕಾಲ ಬೆರಳಿಗೆ ಸೇವಕಿ ಕಾಲುಂಗುರ ತೊಡಿಸುತ್ತಿದ್ದಾಳೆ. ಯುವತಿ ಎಡಗೈಲಿ ಬಳ್ಳಿ ಹಿಡಿದಿದ್ದಾಳೆ. ಪಕ್ಕದಲ್ಲಿ ಒಬ್ಬಳು ಚಾಮರ ಹಿಡಿದಿದ್ದಾಳೆ.

## ಲಾಸ್ಯ ನೃತ್ಯ

ಕುಣಿಯುತ್ತಿರುವ ಯುವತಿಯ ಪಕ್ಕದಲ್ಲಿ ಪಕ್ಕವಾದ್ಯ ಹಿಡಿದಿರುವವರು ವಾದ್ಯ ನುಡಿಸುತ್ತಿದ್ದಾರೆ. ಇದರ ತೋರಣ ಬಹಳ ಚೆನ್ನಾಗಿದೆ. ಇನ್ನೂ ಎಷ್ಟೊಂದಿವೆ ನೋಡಿ. ಸಾಲಾಗಿ ನಲವತ್ತೆರಡು ಮದನಿಕೆಯರನ್ನು ನಿಲ್ಲಿಸಿದ್ದಾರೆ. ಆದರೆ ಈ ಪೈಕಿ ಎರಡು ವಿಗ್ರಹಗಳನ್ನು ಯಾರೋ ಕದ್ದು ಒಯ್ದಿದ್ದಾರೆ.

ಈಗ ದೇವಸ್ಥಾನದ ಒಳಗೆ ಹೋಗೋಣ. ಅಲ್ಲಿ ನೋಡಬೇಕಾದದ್ದು ತುಂಬಾ ಇದೆ. ನೋಡಿ ಸುತ್ತ ಗೋಡೆಯ ಒಳಗಿರುವ ಕಂಬಗಳಲ್ಲದೆ ಬೇರೆ ಕಂಬಗಳೇ ನಲವತ್ತೆರಡು ಇವೆ. ಇವುಗಳಲ್ಲಿ ಮಧ್ಯದಲ್ಲಿರುವ ನಾಲ್ಕು ಕಂಬಗಳು ಒಂದೇ ರೀತಿ ಇವೆ. ಮಿಕ್ಕವು ಬೇರೆ ಬೇರೆ ಆಕಾರಗಳಲ್ಲಿವೆ. ಅಲ್ಲಿ ನೋಡಿ ಆ ಕಂಬದ ಮೇಲ್ಭಾಗದಲ್ಲಿ ದುಂಡಗೆ ಕಡೆದಿದ್ದಾರೆ. ಅದು ಯಾವ ರೀತಿ ಕಾಣುತ್ತೆ ಹೇಳಿ. ಇವತ್ತು ಕಾರುಗಳಿಗೆ ಹಾಕುವ ಬ್ರೇಕ್‌ತರಹ ಕಾಣುತ್ತೆ ಅಲ್ವಾ ಈ ರೀತಿ ಒಂದೊಂದು ಕಂಬವನ್ನು ಗಮನಿಸಿ ನೋಡಿ. ಈ ನಾಲ್ಕು ಕಂಬಗಳು. ಇದರ ಮಧ್ಯದಲ್ಲಿರುವುದೇ ರಂಗಮಂಟಪ. ಅದರ ಮೇಲೆ ಶಾಂತಲೆ ನೃತ್ಯ ಮಾಡುತ್ತಿದ್ದಳು ಎಂದು ಹೇಳುತ್ತಾರೆ. ಈ ಕಂಬ ನೋಡಿ. ಈ ದೇವಸ್ಥಾನದಲ್ಲಿರುವ ಎಲ್ಲ ಕೆತ್ತನೆಯೂ ಇದರಲ್ಲಿದೆ. ಇದಕ್ಕೆ ನರಸಿಂಹ ಎಂದು ಹೆಸರು.

ಇಲ್ಲಿ ನೋಡಿ ಅಂಗೈ ಅಗಲ ಕಡೆಯದೆ ಹಾಗೆ ಬಿಟ್ಟಿದ್ದಾರೆ. ಏಕೆ ಗೊತ್ತೆ ? ಕಡೆಯದೆ ಏನಾದರೂ ಬಿಟ್ಟಿದ್ದರೆ ಇಲ್ಲಿ ಕೆತ್ತಿ ಎಂದು ಸವಾಲು ಹಾಕಿದಂತೆ. ಈ ಕಂಬವನ್ನು ತಿರುಗಿಸುವ ಹಾಗೆ ಇಟ್ಟಿದ್ದರು. ಇದರ ಮೇಲಿನ ಕಲ್ಲು ಒಡೆದಿರುವುದರಿಂದ ಈಗ ಸುತ್ತುವುದಿಲ್ಲ. ಇದರಲ್ಲಿ " ಕಡಲೆ ಬಸವಣ್ಣ"ಇದೆ ನೋಡಿ. ಅದರಲ್ಲಿ ಪ್ರತಿಯೊಂದು ಅಂಗಗಳೂ ಚೆನ್ನಾಗಿ ಕಾಣುವಂತೆ ಕೆತ್ತನೆ ಮಾಡಿದ್ದಾರೆ. ಎರಡನೆಯ ಕಂಬ ಸುಕನಾಸಿಯ ಬಾಗಿಲ ಕಡೆ ಇದೆ. ಇದನ್ನು ಸುಂದರವಾಗಿ ಕೆತ್ತಿದ್ದಾರೆ. ಉದ್ದವಾದ ಚಿತ್ರ ಪಟ್ಟಿಕೆಗಳಿವೆ.

ಈ ಪಟ್ಟಿಕೆಯಲ್ಲಿ ಬಳ್ಳಿಗಳ ಬಿಳಲುಗಳೂ, ಅವುಗಳ ಮಧ್ಯೆ ತ್ರಿಮೂರ್ತಿಗಳೂ, ದಶಾವತಾರ, ಅಷ್ಟದಿಕ್ಪಾಲಕರು ಮುಂತಾದುವು ಇವೆ.

ಈ ನಾಲ್ಕು ಕಂಬಗಳ ಮೇಲೆ ನಾಲ್ಕು ಮದನಿಕೆ ವಿಗ್ರಹಗಳಿವೆ ನೋಡಿ. ಅದರಲ್ಲಿ ಒಂದು ಗಿಣಿಯು ಕೂತಿದೆ. ಆಕೆಯ ಕೈ ಬಳೆಗಳನ್ನು ತಿರುಗಿಸಬಹುದು. ಇನ್ನೊಂದು ಸರಸ್ವತಿ, ಈ ವಿಗ್ರಹದ ಕಿರೀಟವನ್ನು ಎತ್ತಿ ಇಡಬಹುದು. ಮೂರನೆ ವಿಗ್ರಹ ನರ್ತಿಸುತ್ತಿರುವಂತೆ, ನಾಲ್ಕನೆಯದು ತಲೆಬಾಚಿಕೊಳ್ಳುತ್ತಿರುವಂತೆ ಕೆತ್ತಲಾಗಿದೆ. ನೋಡಿ ತಲೆ ಮೇಲೆ ಕಾಣುತ್ತಿದೆಯೆ ? ಇಲ್ಲ ಅಲ್ಲವೆ ? ತಡೆಯಿರಿ. ಲೈಟ್ ಹಾಕುತ್ತಾರೆ. ಹಾ ! ಈಗ ಕಾಣುತ್ತೆ ಅಲ್ಲವೆ ? ಅದು ಕಮಲದ ಮೊಗ್ಗಿನ ಆಕೃತಿಯಲ್ಲಿ ಇಳಿ ಬಿದ್ದಿದೆ. ಇದರ ಮುಖದಲ್ಲಿ ಹಿರಣ್ಯಕಶಿಪುವಿನ ಸಂಹಾರ ಮೂರ್ತಿ ನರಸಿಂಹನನ್ನು ಕೆತ್ತಿದೆ. ಹಿರಣ್ಯಕಶಿಪುವಿನ ಹೊಟ್ಟೆಯಿಂದ ಬಗೆದ ಕರುಳು ಕಾಣುತ್ತದೆ ನೋಡಿ. ಈ ದೇವಸ್ಥಾನದಲ್ಲಿ ಗುಂಡಗೆ ಇರುವ ಆಕೃತಿ ಭುವನೇಶ್ವರಿಯದೊಂದೆ. ಮಿಕ್ಕವು ಚಪ್ಪಟೆಯಾಗಿವೆ.

ನೋಡಿ ಇದು ಮೋಹಿನಿ ವಿಗ್ರಹ. ಬಹುಸುಂದರವಾಗಿದೆ. ಹೆಸರೆ ಮೋಹಿನಿ, ಕೇಳಬೇಕೆ! ಶರೀರ ಮೂರು ಭಂಗಿಯಲ್ಲಿ ಇದೆ. ಆಕೆಯ ಹಣೆ, ಮೂಗು, ಮೂಗಿನಿಂದ ಗದ್ದದವರೆಗೆ ಸರಿಯಾದ ಅಳತೆಯಲ್ಲಿ ಕೆತ್ತಿದೆ. ಕಾಲಿನ ಹೆಬ್ಬೆಟ್ಟಿಗಿಂತ ಪಕ್ಕದ ಬೆರಳು ಉದ್ದವಿದೆ. ಸೊಂಟ ಸಣ್ಣಗಿದೆ. ಬಹು ಆಕರ್ಷಕ ವಿಗ್ರಹ. ಈಗ ಅದರ ಕೈಗಳು ಮುರಿದಿವೆ.

ನೋಡಿ, ಈ ಮೂಲೆಯ ಪಟ್ಟಿಕೆಯಲ್ಲಿ ಯಕ್ಷ, ದಶಾವತಾರ ವಿಗ್ರಹಗಳಿವೆ. ದಕ್ಷಿಣ ಮತ್ತು ಉತ್ತರ ಪಟ್ಟಿಕೆಗಳಲ್ಲಿ ಸಿಂಹದ ದೇಹ ಮತ್ತು ಮನುಷ್ಯ, ನಾಗ ಗರುಡ, ಮಯೂರ ಅಂದರೆ ನವಿಲು, ಜಿಂಕೆ, ಮೇಷ. ಆನೆ, ಗಿಣಿ, ಕಪಿ, ನಾಯಿ, ಬಸವ, ಹಂದಿ, ಕುದುರೆ, ಶರಭ ಇತ್ಯಾದಿ ತಲೆ ಇರುವ ವಿಗ್ರಹಗಳಿವೆ.

ನೋಡಿ ಇದೇ ಚೆನ್ನಕೇಶವ ವಿಗ್ರಹ. ಇದಕ್ಕೆ ವಿಜಯನಾರಾಯಣ ಎಂದು ಇನ್ನೊಂದು ಹೆಸರು ಇದೆ. ಇದರ ಪೀಠ ಮೂರೂವರೆ ಅಡಿ ಎತ್ತರ ಇದೆ. ವಿಗ್ರಹ ಒಂಬತ್ತು ಅಡಿ ಎತ್ತರ ಇದೆ. ನಾಲ್ಕು ಕೈಗಳಲ್ಲಿ ಪದ್ಮ, ಶಂಖ, ಚಕ್ರ, ಗದೆಗಳಿವೆ.

ಉಂಗುರ, ಹಾರ, ಕಟಿಬಂಧ, ಅಂದಿಗೆ, ಕಾಲು ಬೆರಳಿಗೆ ಉಂಗುರ ಹೀಗೆ ಆಭರಣ ಧರಿಸಿದೆ. ಪೀಠದ ಮೇಲೆ ಬೊಗಸೆ ಹಿಡಿದಿರುವ ಗರುಡ ಇದೆ.

ನೋಡಿದಿರಲ್ಲ ಬನ್ನಿ. ಈಗ ಕಪ್ಪೆ ಚೆನ್ನಿಗನ ದೇವಸ್ಥಾನಕ್ಕೆ ಹೋಗೋಣ. ಇದನ್ನು ಕಟ್ಟಿಸಿದವಳು ಶಾಂತಲೆ. ಇದರ ಬಾಗಿಲನ್ನು ತೆರೆಯುವುದಿಲ್ಲ. ಇದರಲ್ಲಿ ಎರಡು ಗರ್ಭಗುಡಿಗಳು ಇವೆ. ಪಶ್ಚಿಮದ ಗರ್ಭಗುಡಿಯಲ್ಲಿ ಕಪ್ಪೆ ಚೆನ್ನಿಗ, ದಕ್ಷಿಣಗುಡಿಯಲ್ಲಿ ಕೊಳಲು ಹಿಡಿದಿರುವ ಕೃಷ್ಣನ ವಿಗ್ರಹ ಇದೆ. ಇದನ್ನು ನಕ್ಷತ್ರ ಆಕಾರದ ಜಗಲಿ ಮೇಲೆ ಕಟ್ಟಿದೆ. ನವರಂಗದ ಗೂಡುಗಳಲ್ಲಿ ಲಕ್ಷ್ಮೀನಾರಾಯಣ, ಸರಸ್ವತಿ, ಗಣಪತಿ ಮತ್ತು ಮಹಿಷಾಸುರ ಮರ್ದಿನಿ ವಿಗ್ರಹಗಳು ಇವೆ. ಗೂಡುಗಳಲ್ಲಿರುವ ಮಹಿಷಾಸುರ ಮರ್ದಿನಿ ವಿಗ್ರಹವಂತೂ ತುಂಬಾ ಚೆನ್ನಾಗಿದೆ. ಕಪ್ಪೆ ಚೆನ್ನಿಗರಾಯನ ಮುಖದಲ್ಲಿ ಮಂದಹಾಸವಿದೆ. ಕೈಯಲ್ಲಿ ಶಂಖ, ಚಕ್ರ, ಗದೆ, ಪದ್ಮಗಳಿವೆ.

ಈಗ ಚನ್ನಕೇಶವ ದೇವಾಲಯದ ಆಕ್ಕಪಕ್ಕಕ್ಕೆ ನೋಡಿ. ಅದು ಸೋಮನಾಯಕಮ್ಮನವರ ದೇವಾಲಯ. ನೋಡಿ ಆ ಇನ್ನೊಂದು ಪಕ್ಕಕ್ಕೆ ಆಂಡಾಳಮ್ಮನವರ ದೇವಾಲಯ ಇದೆ.

ಇಲ್ಲಿ ಬನ್ನಿ. ಇದು ಕಲ್ಲಿನಕಂಬ. ಸುಮಾರು ಮೂವತ್ತು ಅಡಿಗೂ ಹೆಚ್ಚು ಎತ್ತರವಾಗಿದೆ ಇದನ್ನು ಹಾಗೆ ನಿಲ್ಲಿಸಿದ್ದಾರೆ. ಕೆಳಗಡೆ ನೋಡಿ. ಅತ್ತ ಇತ್ತ ಸಂದಿ ಕಾಣುತ್ತದೆ. ಒಂದು ಆಯ ಹಿಡಿದು ನಿಲ್ಲಿಸಿದ್ದಾರೆ. ಹಿಂದೆ ಇದರ ಕೆಳಗೆ ಆಚೆ ಕಡೆಯಿಂದ ಈಚೆ ಕಡೆಗೆ ಬಟ್ಟೆ ಎಳೆಯುತ್ತಿದ್ದರು ಎಂದು ಹೇಳುತ್ತಾರೆ. ಈಗ ಆಗುವುದಿಲ್ಲ. ಈಗ ಅದರ ಮೂಲೆ ನೆಲದ ಮೇಲೆ ಕೂತಿದೆ.

ಇನ್ನೂ ಈ ಮೂಲೆಯಲ್ಲಿ ಒಂದು ಕೊಳ ಇದೆ. ಅದನ್ನು ನೋಡೋಣ. ಇದಕ್ಕೆ ವಾಸುದೇವ ಸರೋವರ ಎಂದು ಹೆಸರು. ಸುತ್ತಗೋಡೆ ಇದೆ. ಒಳಕ್ಕೆ ಹೋಗಲು ಪ್ರವೇಶದ ಮಂಟಪ ಇದೆ. ಕಲ್ಲಿನ ಮೆಟ್ಟಲುಗಳಿವೆ. ನೋಡಿ ಮೀನುಗಳು ಇವೆ. ಯಾರಾದರೂ ಪುರಿ ತಂದಿದ್ದರೆ ಹಾಕಿ ಮೇಲೆ ಬರುತ್ತವೆ. ಬನ್ನಿ ಇದರ ಪಕ್ಕದಲ್ಲಿರುವುದೇ

ಪಾಕ ಶಾಲೆ. ಪಾಕಶಾಲೆ ಅಂದರೆ ಗೊತ್ತಲ್ಲ. ಅಡಿಗೆ ಮನೆ. ಓ ಆಗಲೇ ಊಟದ ಹೊತ್ತಾಯ್ತು. ಹೊಟ್ಟೆ ಹಸೀತಾ ಇರಬೇಕು ಅಲ್ಲ? ಬನ್ನಿ ಊಟ ಮಾಡಿಕೊಂಡು ಹಳೇಬೀಡಿಗೆ ಹೋಗೋಣ.

## ಹಳೇಬೀಡು

ಹಳೇಬೀಡು ಬೇಲೂರಿನಿಂದ ಪೂರ್ವಕ್ಕೆ ಹದಿನಾರು ಕಿಲೋಮೀಟರ್ ದೂರದಲ್ಲಿದೆ. ಇದಕ್ಕೆ ದ್ವಾರಸಮುದ್ರ, ದ್ವಾರಾವತಿ ಎಂಬ ಹೆಸರು ಇತ್ತು. ಇದು ಹೊಯ್ಸಳರ ರಾಜಧಾನಿ ಆಗಿತ್ತು. ಅದರ ವೈಭವ ಹೇಗಿತ್ತು ಎಂದು ಈಗ ಅದನ್ನು ಹಾಗೂ ಅದರ ಸುತ್ತಮುತ್ತ ಇರುವ ದೇವಸ್ಥಾನ, ಬಸದಿಗಳನ್ನು ನೋಡಿದರೂ ತಿಳಿಯಬಹುದು. ಈ ದೇವಸ್ಥಾನ ದೊಡ್ಡದಾಗಿದೆ, ಸುಂದರವಾಗಿದೆ.

ಇದನ್ನು ಕಟ್ಟುವುದಕ್ಕೆ ಅದೆಷ್ಟು ಶ್ರಮ ಪಟ್ಟಿದ್ದಾರೋ ತಿಳಿಯದು. ಅದರ ವಿನ್ಯಾಸ, ಅಲಂಕಾರ, ನಿರ್ಮಾಣದ ಬುದ್ಧಿವಂತಿಕೆ ಮೆಚ್ಚಬಹುದು. ಇದು ನಕ್ಷತ್ರದ ಆಕಾರದಲ್ಲಿದೆ. ದೇವಸ್ಥಾನದ ಮುಖ ಪೂರ್ವದಿಕ್ಕಿಗೆ ಇದೆ. ಇದು ಜೋಡಿಕಟ್ಟಡ. ಅಂದರೆ ಎರಡು ಗರ್ಭಗುಡಿಗಳಿವೆ. ಒಂದರಲ್ಲಿ ಹೊಯ್ಸಳೇಶ್ವರ ಮತ್ತೊಂದರಲ್ಲಿ ಶಾಂತಳೇಶ್ವರ ಲಿಂಗಗಳಿವೆ. ಒಂದೊಂದು ಭಾಗದ ಮುಂದೆ ಒಂದೊಂದು ನಂದಿ ಮಂಟಪವಿದೆ. ಅದರಲ್ಲಿ ಬಹುದೊಡ್ಡ ನಂದಿ ವಿಗ್ರಹಗಳಿವೆ.

ದಕ್ಷಿಣದ ನಂದಿ ಉತ್ತರದ ನಂದಿಗಿಂತ ದೊಡ್ಡದು. ಐದು ಅಡಿ ಅಗಲ, ಏಳೂವರೆ ಅಡಿ ಎತ್ತರ ಇದೆ. ಇದರ ಮುಂದೆ ಒಂದು ಸೂರ್ಯನಾರಾಯಣನ ಗುಡಿ ಇದೆ. ದೇವಸ್ಥಾನದ ಒಳಗೆ ಹೋಗಲು ಪೂರ್ವದ ಕಡೆ ಎರಡು ಬಾಗಿಲು, ದಕ್ಷಿಣದಲ್ಲಿ ಒಂದು, ಉತ್ತರದಲ್ಲಿ ಒಂದು, ಒಟ್ಟು ನಾಲ್ಕು ಬಾಗಿಲುಗಳಿವೆ. ಬಾಗಿಲಿನಲ್ಲಿ ತಾಂಡವೇಶ್ವರ

ವಿಗ್ರಹಗಳಿವೆ. ಹಾಗೆ ದ್ವಾರಪಾಲಕ ವಿಗ್ರಹಗಳೂ ಇವೆ.

ದಕ್ಷಿಣ ದಿಕ್ಕಿನ ಬಾಗಿಲು ಸುಂದರವಾಗಿದೆ. ಈ ಬಾಗಿಲಿನಿಂದ ರಾಜನು ಪೂಜೆಗೆ ಬರುತ್ತಿದ್ದನಂತೆ. ದೇವಸ್ಥಾನದ ಆಚೆ ದಕ್ಷಿಣ ಭಾಗದಲ್ಲಿ ಒಂದು ದೊಡ್ಡ ಗಣಪತಿ ವಿಗ್ರಹ ಇದೆ. ಅದು ಬಯಲಿನಲ್ಲಿ ಕುಳಿತಿದೆ. ಒಳಗೆ ಎರಡೂ ಅಂಗಣಗಳು ಸೇರಿ ಒಂದು ಬಹುದೊಡ್ಡ ಸಭಾಮಂಟಪ ಆಗುತ್ತದೆ. ಗರ್ಭಗೃಹ ಹದಿನಾರು ಮೂಲೆಗಳಿರುವ ನಕ್ಷತ್ರದ ಆಕಾರದಲ್ಲಿದೆ. ನವರಂಗದ ಗೋಡೆಯಲ್ಲಿ ಆರು ಗೂಡುಗಳಿವೆ.

ಗೋಡೆಯ ಹೊರಭಾಗದಲ್ಲಿ ಒಂದರ ಮೇಲೆ ಒಂದರಂತೆ ಎಂಟು ಸಾಲುಗಳ ಚಿತ್ರಪಟ್ಟಿಕೆ ಇದೆ. ಅದರಲ್ಲಿ ಬುಡದಿಂದ ಆನೆಗಳ ಸಾಲು, ಸಿಂಹಗಳ ಸಾಲು, ಬಳ್ಳಿಯ ಸಾಲು, ಇವುಗಳ ಮಧ್ಯೆ ಅಲ್ಲಲ್ಲಿ ಋಷಿಗಳು, ಸಿದ್ಧರು, ಆಟ ಆಡುತ್ತಿರುವ ಪಕ್ಷಿಗಳು, ರಾವುತರು, ಒಂಟೆಗಳು, ಪುರಾಣ ಹೇಳುವ ವಿಗ್ರಹಗಳು, ಹಂಸಗಳು ಇತ್ಯಾದಿ ಅನೇಕ ಚಿತ್ರಗಳಿವೆ. ಇದಲ್ಲದೆ ಇನ್ನೂ ಅನೇಕ ಸಾಲುಗಳಿವೆ. ಕುಳಿತಿರುವ ವಿಗ್ರಹಗಳ ಸಾಲು, ನಿಂತಿರುವ ವಿಗ್ರಹಗಳ ಸಾಲು ಅವುಗಳ ಮೇಲೆ ಲೋವೆಕಲ್ಲು ಇವೆ. ಅವುಗಳ ಮೇಲೆ ಸಣ್ಣ ಸಣ್ಣ ಗೋಪುರಗಳಿವೆ. ಮಧ್ಯೆ ಮಧ್ಯೆ ಸಿಂಹಗಳಿವೆ. ಅದರ ಮೇಲೆ ದೊಡ್ಡ ದೊಡ್ಡ ವಿಗ್ರಹಗಳನ್ನು ಕೆತ್ತಿದ್ದಾರೆ.

ಪಶ್ಚಿಮ ದಿಕ್ಕಿಗೆ ಗಮನ ಹರಿಸಿದರೆ ಆ ಗೋಡೆಯಲ್ಲಿ ಎಷ್ಟೊಂದು ವಿಗ್ರಹಗಳಿವೆ. ಶಿವನ ಅವತಾರ, ಹರಿಹರ, ವಾಮನ, ತ್ರಿವಿಕ್ರಮ, ಇಂದ್ರ, ರಾವಣ, ಗರುಡ, ಆಂಜನೇಯ ಮುಂತಾದ ವಿಗ್ರಹಗಳಿವೆ. ಶಿವನು ಮೋಹಿನಿಯನ್ನು ಮೋಹಿಸಿದ ಪೌರಾಣಿಕ ಕಥೆ ಇದೆ. ಕ್ಷೀರಸಾಗರ ಮರ್ಥ, ಶುಕ್ರಕಚದೇವನಿಯಾ ಕಥೆ, ಉಮಾ ಮಹೇಶ್ವರನ ಆಸ್ಥಾನ, ಬಲಿ,ವಾಮನ, ವೀರಭದ್ರ, ಕೃಷ್ಣನ ಚರಿತ್ರೆಗಳು ಇವೆ. ರಾಮಾಯಣ ಕಥೆಗಳೂ ಇವೆ. ಮಹಾಭಾರತದ ಕಥೆಗಳೂ ಇವೆ. ಇವುಗಳನ್ನು ವಿವರವಾಗಿ ಕಡೆದಿದ್ದಾರೆ. ಇದು ಕಾವ್ಯಶಿಲ್ಪವಾಗಿದೆ.

ಇವುಗಳನ್ನು ನೋಡಿದ ಮೇಲೆ ಈಗ ನಾವು ಕೇದಾರೇಶ್ವರ ದೇವಾಲಯ ನೋಡೋಣ. ಇದು ವಿಸ್ತಾರದಲ್ಲಿ ಚಿಕ್ಕದು. ಮೊದಲು ಇಲ್ಲಿ ಒಂದು ಗರ್ಭಗುಡಿ ಇತ್ತು. ಈಗ ಅದನ್ನು ಮೂರು ಗರ್ಭಗುಡಿಗಳಾಗಿ ಮಾಡಿದ್ದಾರೆ.

ಇದಲ್ಲದೆ ಹಳೆಯಬೀಡಿನಲ್ಲಿ ಪುರಾತನವಾದ ನಿವೇಶನ ಇದೆ. ಇವುಗಳನ್ನು ಅಗೆದು ತಳದಲ್ಲಿ ಇರುವ ವಿಗ್ರಹಗಳನ್ನು ತೆಗೆಯುತ್ತಿದ್ದಾರೆ. ಅರಮನೆಯ ಸುಳಿವು ಸಿಗುವ ಸಾಧ್ಯತೆ ಇದೆ. ಈಗ ಹೊಸದಾಗಿ ಸಿಗುತ್ತಿರುವ ವಿಗ್ರಹಗಳನ್ನು ನೋಡಿ, ಅಲ್ಲಿ ಕಾಣುತ್ತಿದೆಯಲ್ಲ, ಸ್ವಲ್ಪ ದೂರದಲ್ಲಿ, ಆ ಜಾಗದಲ್ಲಿ ಸಾಲಾಗಿ ಜೋಡಿಸುತ್ತಿದ್ದಾರೆ. ಅವುಗಳನ್ನು ನೋಡಿಕೊಂಡು ಬನ್ನಿ.

ನಾನು ಮೊದಲೇ ಹೇಳಿದೆ. ಹೊಯ್ಸಳರ ಕಾಲದಲ್ಲಿ ಎಲ್ಲ ಧರ್ಮದವರಿಗೂ ಸ್ವಾತಂತ್ರ ಇತ್ತು ಎಂದು. ವಿಷ್ಣುವರ್ಧನನ ಹೆಂಡತಿ ಶಾಂತಲಾದೇವಿ ಜೈನಧರ್ಮವನ್ನು ಸ್ವೀಕರಿಸಿದ್ದಳು. ಹಾಗಾಗಿ ಇಲ್ಲಿ ಪಾರ್ಶ್ವನಾಥ ಬಸದಿ, ಆದಿನಾಥ ಬಸದಿ, ಶಾಂತಿನಾಥ ಬಸದಿ ಮುಂತಾಗಿ ಅನೇಕ ಬಸದಿಗಳಿವೆ. ಈ ಬಸದಿಗಳು ದೇವಸ್ಥಾನದಿಂದ ಸುಮಾರು ಎರಡು ಕಿಲೋಮೀಟರು ದೂರದಲ್ಲಿವೆ.

ಹತ್ತಿರದ ಬಸದಿ ಹಳ್ಳಿಯಲ್ಲಿ ವಿರಕ್ತ ಮಠ ಇದೆ. ಅಲ್ಲಿ ಸುಂದರವಾದ ಶಿವನ ಗುಡಿ ಇದೆ. ಈಗ ಇದರ ಗೋಡೆ ಮತ್ತು ಗರ್ಭಗುಡಿ ಮಾತ್ರ ಇದೆ. ಇದರ ಗೋಡೆ ಮೇಲೆ ಅಂಧಕಾಸುರಮರ್ಧನ, ಅಷ್ಟದಿಕ್ಪಾಲಕ ವಿಗ್ರಹಗಳು ಇವೆ. ದೇವಾಲಯದ ಹಿಂದಿನ ಗೋಡೆಯಲ್ಲಿ ರಾಮಾಯಣದ ಕಥೆ ಕೆತ್ತಿದ್ದಾರೆ. ದೊಡ್ಡ ವಿಗ್ರಹಗಳೂ ಇವೆ. ದೋರಸಮುದ್ರ ಕೆರೆ ದೇವಸ್ಥಾನದ ಪೂರ್ವದಿಕ್ಕಿನಲ್ಲಿದೆ. ಅದರ ಏರಿಯ ಮೇಲೆ ನಂದಿ ಮುಂತಾದ ವಿಗ್ರಹಗಳು ಇವೆ. ಬಹುದೊಡ್ಡಕೆರೆ. ನೋಡಿದರೆ ಸಮುದ್ರವನ್ನೆ ನೋಡುತ್ತಿರುವಂತೆ ಅನುಭವ ಆಗುತ್ತದೆ.

## ವೀರಭದ್ರ ದೇವಾಲಯ

ಇದು ಹಳೆಯಬೀಡಿನ ಕೋಟೆ ಗೋಡೆ ಹತ್ತಿರ ಇದೆ. ಇದರ ಮುಖ ಮಂಟಪ ವಿಜಯನಗರ ಕಾಲದ್ದು. ಗೋಡೆಗಳು, ಗರ್ಭಗುಡಿ ಹೊಯ್ಸಳರ ಕಾಲದ್ದು. ಗರ್ಭಗುಡಿಯ ಸುತ್ತ ಆನೆ ಸಾಲು, ಲತಾ ಪಟ್ಟಿಕೆಗಳು ಇವೆ. ನಂದಿವಾಹನ, ನೃತ್ಯಸರಸ್ವತಿ, ಬ್ರಹ್ಮ, ಉಮಾಮಹೇಶ್ವರ, ತಾಂಡವೇಶ್ವರ ಇತ್ಯಾದಿ ದೊಡ್ಡ ದೊಡ್ಡ ವಿಗ್ರಹಗಳಿವೆ. ಗರ್ಭಗುಡಿಯಲ್ಲಿ ವೀರಭದ್ರ ವಿಗ್ರಯವಿದೆ. ಆರು ಅಡಿ ಎತ್ತರ ಇದೆ. ಕತ್ತಿ, ತ್ರಿಶೂಲ, ಡಮರು ಹಿಡಿದಿದೆ. ವಿಗ್ರಹ ಸುಂದರವಾಗಿದೆ. ಈ ದೇವಾಲಯದ ಪಕ್ಕದಲ್ಲಿ ಗೂಡ್ಲೇಶ್ವರ ಹಾಗೂ ಕುಂಬೇಶ್ವರ ಗುಡಿಗಳು ಇವೆ.

ಇದಲ್ಲದೆ ರಂಗನಾಥ ದೇವಾಲಯ ಇದೆ. ಇದರ ಗೋಪುರ ಮೆಟ್ಟಲು ಮೆಟ್ಟಲಾಗಿದೆ. ಇನ್ನೂರೈವತ್ತು ಅಡಿ ಎತ್ತರ ಇರುವ ಬೆಣ್ಣೆಗುಡ್ಡ ಇದೆ. ಬೆಣ್ಣೆಗುಡ್ಡದ ಉತ್ತರದ ಕೊನೆಯಲ್ಲಿ ಮೂವತ್ತು ಚೌಕಾಕಾರದ ಜಗತಿ ಇದೆ. ಇದನ್ನು ಪಿರಂಗಿ ಗುಡ್ಡ ಎಂದು ಕರೆಯುತ್ತಿದ್ದರು. ಇದು ಕಾವಲುಗಾರರ ತಾಣವಾಗಿತ್ತು. ಹಳೆಯಬೀಡಿನಿಂದ ವಾಯುವ್ಯದಲ್ಲಿ ಎರಡು ಮೈಲಿ ದೂರದಲ್ಲಿ ನರಸಿಂಹಪುರವಿದೆ. ಅಲ್ಲಿ ಯೋಗಾನರಸಿಂಹ ಗುಡಿ ಇದೆ.

ಹಳೇಬೀಡಿನಿಂದ ಉತ್ತರಕ್ಕೆ ಸುಮಾರು ಹನ್ನೆರಡು ಮೀಟರ್ ದೂರದಲ್ಲಿ ರಾಜನ ಸಿರಿಯೂರು ಇದೆ. ದಕ್ಷಿಣಕ್ಕೆ ಸುಮಾರು ನಾಲ್ಕು ಕಿಲೋಮೀಟರ್ ದೂರದಲ್ಲಿ ಪುಷ್ಪಗಿರಿ ಬೆಟ್ಟವಿದೆ. ಈ ಬೆಟ್ಟದಲ್ಲಿ ದೇವಸ್ಥಾನ ಇದೆ. ಈಗ ಅದು ಯಾತ್ರಾಸ್ಥಳವಾಗಿದೆ. ಬೇಲೂರು ಹಳೇಬೀಡು ದೇವಾಲಯಗಳನ್ನು ಕಟ್ಟಲು ಈ ಪುಷ್ಪಗಿರಿಯಿಂದ ಬಳಪದ ಕಲ್ಲುಗಳನ್ನು ತರಿಸಲಾಗುತ್ತಿತ್ತು. ಈಗ ಅಲ್ಲಿ ಶಿಲ್ಪಕಲಾ ತರಬೇತಿ ಸಂಸ್ಥೆಯನ್ನು ತೆರೆಯಲಾಗಿದೆ. ಅಲ್ಲಿ ಇನ್ನೂ ಪೂರ್ಣ ಪ್ರಮಾಣದಲ್ಲಿ ಕೆಲಸ ನಡೆಯುತ್ತಿಲ್ಲ.

ಹೀಗೆ ಹೊಯ್ಸಳ ಕಾಲದಿಂದ ಇಲ್ಲಿಯವರೆಗೆ ಈ ಕಥೆ ನಡೆದಿದೆ. ಬೇಲೂರು ಹಳೇಬೀಡು ಕನ್ನಡ ನಾಡಿನ, ಕನ್ನಡ ಸಂಸ್ಕೃತಿಯ ಕುರುಹಾಗಿ ಇವೆ. ಅವು ಜೀವಂತವಾಗಿವೆ.

ರಾಷ್ಟ್ರಕವಿ ಕುವೆಂಪು ಅವರು ಹೇಳುವಂತೆ,

"ಸತ್ತವರು ನಾವಲ್ಲ
ನೀವೆಂದು ಸಾರುತಿವೆ"

ಎನ್ನುವ ಮಾತು ನಿಜ. ನಾವು ಈ ದೇವಾಲಯಗಳಿಂದ ಕಲಿಯ ಬೇಕಾದದ್ದು ಬಹಳ ಇದೆ. ಏನು ಮಾಡಲಾಗದಿದ್ದರೂ ಒಮ್ಮೆ ನೋಡುವ ಮನಸ್ಸು ಮಾಡಬೇಕು. ಬಾಳು ಸಾರ್ಥಕವಾಗುತ್ತದೆ. ಜೀವನ ಸಾರ್ಥಕ ಆಗುತ್ತದೆ. ಇವನ್ನು ನೋಡಿ ಉಳಿಸಿಕೊಂಡರೆ ನಾವು ಬದುಕಿದಂತೆ. ಇಲ್ಲವಾದರೆ ಬದುಕಿಯೂ ಸತ್ತಂತೆ.

* * *



ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು